# ಮಹಾ ಪ್ರಭು
# ಶ್ರೀ ಚಟ್ಟಂಬಿಸ್ವಾಮಿ ತಿರುವಡಿಗಳು

ಪ್ರೊ। ಪಿ. ಎನ್. ಮೂಡಿತ್ತಾಯ

ಮಲಯಾಳ ಮೂಲ : ಪ್ರೊ। ಎ. ವಿ. ಶಂಕರನ್

ಕಾಸರಗೋಡು ಪ್ರಕಾಶನ (೧)

ವಿದ್ಯಾನಗರ - 671123

# "SHREE CHATTAMBI SWAMIGALU"

(Prof. A. V. Shankaran)

Translated By : Prof. P. N. Moodithaya
Rtd. Principal (Spl. Grade)
'ShreeLakshmi',
Post. Kayyar, Via Uppala,
Kasaragod - 671322.
☎ : 04998 - 206720

Published By : Kasaragodu Prakashana

Pages : 64

First Impression : 2008



Price : Rs. 40

Printed at : Shreenidhi Printers Puttur.
Ph : 231272



# ಪ್ರಸ್ತಾವನೆ

ಈ ಕೃತಿಕರ್ತೃ ಮಲಯಾಳದ ಮಹಾ ಕವಿಗಳಲ್ಲೊಬ್ಬರಾದ ದಿ। ಪ್ರೊ. ಎ. ವಿ. ಶಂಕರನ್ ಅವರು. ಉಭಯ ಭಾಷಾ ಕವಿ – ಸಾಹಿತಿ. ಮಲಯಾಳದಲ್ಲಿ ಶ್ರೇಷ್ಠ ಚಿಂತಕ, ವಿಮರ್ಶಕ, ಹೆಸರಾಂತ ಜ್ಯೋತಿಷಿ, ಕಾಲೇಜುಗಳಲ್ಲಿ ರಸಾಯನ ಶಾಸ್ತ್ರ ಪ್ರಾಧ್ಯಾಪಕ ಹಾಗೂ ದಾರ್ಶನಿಕನೆನಿಸಿದ ಶಂಕರನ್ ಅವರು ಸಂಸ್ಕೃತದಲ್ಲಿ ಚಟ್ಟಂಬಿ ಸ್ವಾಮೀಜಿಯ ಕುರಿತು ಅರುವತ್ತು ಸಾವಿರ ಶ್ಲೋಕಗಳುಳ್ಳ 'ತೀರ್ಥಪಾದ ಪುರಾಣಂ' ಎಂಬ ಮಹಾಕಾವ್ಯವನ್ನೂ ರಚಿಸಿದ್ದಾರೆ. ಚಟ್ಟಂಬಿ ಸ್ವಾಮಿಗಳ ತತ್ವ ಚಿಂತನೆಯ ಮೇಲೆ ಅಧ್ಯಯನ ನಡೆಸಿ ಡಾಕ್ಟರೇಟ್ ಪಡೆದ ಮತ್ತು ಈಗ ತಿರುವನಂತಪುರದ ಶ್ರೀ ಶಂಕರ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಪ್ರಾಚಾರ್ಯರಾಗಿರುವ ಕಾಂತಲ್ಲೂರು ಸಿ. ಪೌಲೋಸ್ ಅವರು ತೀರ್ಥಪಾದ ಪುರಾಣವನ್ನು ಸಂಸ್ಕೃತದ ಹತ್ತೊಂಬತ್ತನೇ ಪುರಾಣವೆಂದೇ ಕರೆದಿದ್ದಾರೆ.

ಕೃತಿಕಾರ ತನ್ನ ಇನ್ನೊಂದು ಗ್ರಂಥವಾದ ವಿದ್ಯಾಧಿರಾಜ ಕರ್ಣಾಮೃತಂನ 63 ನೇ ಶ್ಲೋಕದಲ್ಲಿ –

ಶ್ರೀ ವಾಸುದೇವಾಯ ದ್ವಿಜ ನಂದನಾಯ
ನಂಕಾ ಕುಮಾರಾಯ ಮಹೇಶ್ವರಾಯ।
ಶ್ರೀ ತೀರ್ಥಪಾದಾಯ ತಪೋಧನಾಯ
ವಿದ್ಯಾಧಿರಾಜಾಯ ನಮ: ಶಿವಾಯ॥

ಎಂದು ಭಕ್ತ ಕವಿಯು ಧಾಟಿಯಲ್ಲಿ ಚಟ್ಟಂಬಿ ಸ್ವಾಮಿಗಳನ್ನು ಸಂಬೋಧಿಸಿದ್ದಾರೆ. ಆದರೆ ತನ್ನದೇ ಗದ್ಯ ಕೃತಿಯಲ್ಲಿ ವರ್ಣನೆ, ಆಧ್ಯಾತ್ಮಿಕ ವಿಶ್ಲೇಷಣೆಗಳಿಗೆ ಆಸ್ಪದ ಕೊಡದೆ ವ್ಯಕ್ತಿತ್ವ ದರ್ಶನವಷ್ಟೇ ಮಾಡಿಸಿದ್ದಾರೆ. ಸಾವಿರಾರು ಪುಟಗಳಲ್ಲಿ ವಿವರಿಸಬಹುದಾದ್ದನ್ನು 130 ಪುಟಗಳಿಗೆ ಭಟ್ಟಿ ಇಳಿಸಿದ್ದಾರೆ.

ಇಷ್ಟಾಗಿಯೂ ಮಹಾಪ್ರಭು ಚಟ್ಟಂಬಿ ಸ್ವಾಮಿ ಅಸಾಮಾನ್ಯನೆನಿಸುತ್ತಾರೆ. ಯಾಕೆಂದರೆ, ಕೇರಳದ ಆಧ್ಯಾತ್ಮಿಕ ರಂಗದಲ್ಲಿ ಶಂಕರಾಚಾರ್ಯರ ನಂತರ ಗಮನ ಸೆಳೆದವರು ಇವರೇ.

ಚಟ್ಟಂಬಿ ಎಂದರೆ ಸಕಲಕಲಾವಲ್ಲಭ. ಗುರುಗಳಿಲ್ಲದಾಗ ಶಾಲೆಯ ಮಕ್ಕಳನ್ನು ನೋಡಿಕೊಳ್ಳುವ ಹೊಣೆ ಹೊತ್ತ ವಿದ್ಯಾರ್ಥಿ ನಾಯಕ. ಇಂತಹ ಚಟ್ಟಂಬಿ ಜನ್ಮದ ಕತ್ತಲೆಯಿಂದ ಮುಕ್ತಿಯ ಬೆಳಕಿನೆಡೆಗೆ ಸಾಗುವ ಒಳ ಸಂಕಲ್ಪ ತೊಟ್ಟವರು. ಈ ತ್ಯಾಗ ಜೀವಿ ತನಗೆ ಅರಿವು ಬಂದಲ್ಲಿಂದ ಸಮಾಜಕ್ಕಾಗಿ ದುಡಿದಿದ್ದಾರೆ. ಎಲ್ಲ ಸಮುದಾಯದವರ ಮನೆಗಳನ್ನೂ ಸಂದರ್ಶಿಸುತ್ತ ಎಲ್ಲಿಯೂ ಆಹಾರ ಸ್ವೀಕರಿಸುವ ವರೆನಿಸಿ ಕ್ರಾಂತಿಯ ಹೆಜ್ಜೆಯಿಟ್ಟಿದ್ದಾರೆ.

ಚಟ್ಟಂಬಿ ಸ್ವಾಮಿ ಬದುಕಿದ್ದ ಕಾಲ ಅಂಥಾದ್ದು. ಇನ್ನೂ ಸಾರ್ವಜನಿಕ ಶಿಕ್ಷಣ ಕಣ್ಣೊಡೆದಿರಲಿಲ್ಲ. ಆಗಲೇ 1867 ರಿಂದ 1870 ರೊಳಗೆ ಕೇರಳ ವರ್ಮ ವಲಿಯಕೋಯಿ ತಂಬುರಾನ್ ಎಂಬವರು ಮಿಶನರಿ ಶೈಲಿಯ ಪಠ್ಯ ಪುಸ್ತಕಗಳನ್ನು ರಚಿಸಿದ್ದರು. ಮತ ನಿರಪೇಕ್ಷತೆ ಅದರಲ್ಲಿನ ಪಾಠಗಳ ವರಸೆಯಾಗಿತ್ತು. ಆ ಪಾಠಗಳಿಗಿಂತಲೂ ಪಕ್ವ ಶೈಲಿಯ ಚಟ್ಟಂಬಿ ಅವರ ಗದ್ಯ ಕೃತಿಗಳು ಮಾತ್ರ ಬೇರೆಯೇ ಹಾದಿ ಹಿಡಿದುವು. ದೈವಭಕ್ತಿ, ಧಾರ್ಮಿಕತೆ, ಪ್ರೀತಿ, ಪ್ರಾಣಿದಯೆಗಳು ಆ ಬರಹಗಳ ತಿರುಳೆನಿಸಿದುವು.

ಶಾಲಾ ಶಿಕ್ಷಣ ಮತ್ತು ಸಮಗ್ರ ಶಿಕ್ಷಣ ಹೀಗೆ ಕವಲಾದ ಕಾಲಘಟ್ಟದಲ್ಲಿ ಸಾಮಾಜಿಕ ಮೌಢ್ಯಕ್ಕೆ ಕೊಡಲಿಯೇಟಾದ ಸ್ವಾಮಿಗಳು ಸಹಜವಾಗಿಯೇ ಶ್ರೀ ನಾರಾಯಣ ಗುರುವಿಗೆ ಗುರುವಾದರು. ಸ್ವಾಮಿ ವಿವೇಕಾನಂದರಿಗೆ ಸಖನೆನಿಸಿದರು.

ಚಟ್ಟಂಬಿ ಸ್ವಾಮಿಗಳ ಕಾಲದಲ್ಲಿ ಪ್ರಕೃತಿ ಇಷ್ಟು ಹೀನಾಯ ಆಕ್ರಮಣಕ್ಕೊಳಗಾಗಿರಲಿಲ್ಲ. ಆದರೆ ರಕ್ಷಕರೆನಿಸಿದವರು ಭಕ್ಷಕರಾಗುತ್ತಿರುವ ಇಂದು ಇಂತಹ ಸಮಾಜ ಸುಧಾರಕರು ಬೇಕಿತ್ತು. ಸ್ವಾಮೀಜಿ ಅವರ ಕಾರ್ಯಕ್ಷೇತ್ರದಲ್ಲಿ ಇರುವೆ, ಇಲಿ, ಕಪ್ಪೆ, ಜೇಡ, ಹಾವು, ನಾಯಿ, ದನ, ಕರು – ಪ್ರಾಣಿ ಪಕ್ಷಿಗಳೆಲ್ಲ ಬೇಧ ಭಾವವಿಲ್ಲದೆ ಜೀವನ ತತ್ವ ಸಾರುವುದಕ್ಕೆ ಸಾಥಿ ನೀಡಿದುವು!

ಸ್ವಾಮೀಜಿಗಾಗಿ ಹುಲಿಯೊಂದು ತನ್ನ ಕೊಳ್ಳೆಯನ್ನು ಬಿಟ್ಟುಕೊಡುವುದಕ್ಕೆ ಸಿದ್ಧವಾಗಿತ್ತು. ಅಷ್ಟು ಶ್ರೀಮಂತ ಆಹಾರ ವ್ಯವಸ್ಥೆ ಅಂದಿನ ಪ್ರಾಣಿಗಳಿಗಿತ್ತು. ನಾಯಿಗಳಿಗೂ, ಇರುವೆಗಳಿಗೂ ಆಹಾರ ಹಂಚುವಲ್ಲಿ ಜನರು ಸ್ವಾಮಿಗಳೊಂದಿಗೆ ಕೈ ಜೋಡಿಸಿದ್ದರು. ಇವತ್ತಿನ ನಾವು ಅಷ್ಟು ಉದಾರಿಗಳಲ್ಲ. ಕಾಡಿನ ವೈವಿಧ್ಯಮಯವಾದ ಕೊಡುಗೆಗಳ ಹಂಗು ನಮಗಿಲ್ಲ. ರಬ್ಬರ್ ಕಾಡು ನಮ್ಮ ಆಯ್ಕೆಯಾದಾಗ ಮಂಗಗಳೂ ಇತರ ಅನೇಕ ಮೂಕ ಪ್ರಾಣಿಗಳೂ ತಮ್ಮನ್ನೇ ಕೊಂದು ಕೊಂಡುವು. ನೆಲೆ ತಪ್ಪಿದ ಹಂದಿ ಮೊಲಗಳು ಬೆಳೆ ನಾಶಕ್ಕೆ ಮುಂದಾದುವು. ಸಾಕು ಪ್ರಾಣಿಗಳಿಗೇ ಮೋಕ್ಷ ಕೊಟ್ಟ ನಾವು ಇದನ್ನೆಲ್ಲ ಅರ್ಥ ಮಾಡಿಕೊಳ್ಳಲಿಲ್ಲ.

ಎ. ವಿ. ಶಂಕರನ್ ಅವರ ಕೃತಿಯನ್ನು ಓದುತ್ತಿದ್ದಂತೆ ನಮಗೆ ಪಂಚತಂತ್ರದ ವಿಷ್ಣು ಶರ್ಮ, ಕನ್ನಡದ ಸರ್ವಜ್ಞ, ಸಾಹಿತಿ ಡಿ. ವಿ. ಜಿ., ಅಪ್ಪಿಕೋದ ಬಹುಗುಣ ಮುಂತಾದವರ ನೆನಪು ಒಟ್ಟಿಗೇ ಆಗುತ್ತದೆ. ಈ ತನಕ **'ಚಟ್ಟಂಬಿ'** ಎಂಬ ಮಾತು ತಮಾಷೆಯ ಅಂಕಿತವಾಗಿದ್ದರೆ ಅದಕ್ಕಾಗಿ ವಿಷಾದ ಪಡುವಂತಾಗುತ್ತದೆ. ಇದೀಗ ಕನ್ನಡದ ಓದುಗರಿಗೆ ಅಮೂಲ್ಯ ಕೊಡುಗೆಯಾಗುತ್ತದೆಂಬ ಕನಸು ಕಾಣುತ್ತ ಮುದ್ರಣದ ಸಾಹಸಕ್ಕೆ ಮನಸ್ಸು ಮಾಡಿದೆ.

ಪ್ರಕಟಣೆಗೆ ಅನುವಿತ್ತ ಪ್ರೊ. ಎ. ವಿ. ಶಂಕರನ್ ಅವರ ಪುತ್ರ ಸಂಸ್ಕೃತ ಪ್ರಾಧ್ಯಾಪಕ ಶ್ರೀ ವಿ. ವಿ. ಗಿರಿ, ಮುಖಚಿತ್ರ ವಿನ್ಯಾಸಗೊಳಿಸಿದ ಶ್ರೀ ವಿ. ಗೋಪಕುಮಾರ್ ಅಭಿನಂದನೀಯರು.

ಪ್ರೊ। ಪಿ. ಎನ್. ಮೂಡಿತ್ತಾಯ

---



ಈ ಕೃತಿ ನನ್ನ ಅತ್ತೆ
ದಿ। ಕೆ. ಇಂದಿರಮ್ಮ ಅವರಿಗೆ ಸಮರ್ಪಿತ



**1924 ರ ಮೇ** ತಿಂಗಳು ಐದನೇ ತಾರೀಕು ಬೇಸಿಗೆಯ ಹಗಲು. ಸ್ಥಳ – ಪನ್ಮನ ಸಿ.ಪಿ.ಪಿ. ಸ್ಮಾರಕ ವಾಚನಾಲಯ. ಸೂರ್ಯ ಕಿರಣ ಸೋಕದ ಒಂದು ಕೋಣೆಯ ಸಾಮಾನ್ಯ ಮಂಚವೊಂದರ ಮೇಲೆ ಅಸೌಖ್ಯದಿಂದ ಮುದುಕರೊಬ್ಬರು ಮಲಗಿದ್ದಾರೆ.

ಮಂಚದ ಕೆಳಗೊಂದು ಕೇರೆ ಹಾವು. ಹತ್ತಿರದಲ್ಲೊಂದು ಕಪ್ಪೆ. ಸಾಲದ್ದಕ್ಕೆ ಸುತ್ತುವರಿದ ಅನೇಕ ಜನರು. ವಯೋವೃದ್ಧ ಬಂದವರೆಲ್ಲರ ಕುಶಲ ಕೇಳುತ್ತಾರೆ. ಮಧ್ಯಾಹ್ನಕ್ಕೆ ಮೊದಲೇ ಅವರೆಲ್ಲರೂ ಬೀಳ್ಕೊಡುತ್ತಾರೆ.

ಹೊತ್ತು ನೆತ್ತಿಗೇರುತ್ತಿದ್ದಂತೆ ಒಬ್ಬಾತ ಖಂಜಿರವನ್ನು ಹಿಡಿದುಕೊಂಡು ಒಳಬರುತ್ತಾನೆ. ಅದರ ವಾದನವನ್ನು ಕೇಳಿ ಆನಂದಿತನಾದ ಮುದುಕ ತಾನೇ ಅದನ್ನು ತೆಗೆದುಕೊಂಡು ಮನೋಜ್ಞವಾಗಿ ನುಡಿಸುತ್ತಾರೆ. ದೇವತೆಗಳೂ ಅದನ್ನು ಕೇಳುವುದಕ್ಕಾಗಿ ಅದೃಶ್ಯ ರೂಪದಲ್ಲಿ ನೆರೆದಿರಬೇಕು.

ಮಧ್ಯಾಹ್ನ ದಾಟಿದೆ. ಹೆಚ್ಚು ಕಡಿಮೆ ಮೂರುಗಂಟೆ. ರೋಗಿಯ ಕೋಣೆಯಿಂದ ಕರೆಕೇಳಿಸಿತು. ಕೃಷ್ಣಪಿಳ್ಳೆ ಒಳಕ್ಕೆ ಹೆಜ್ಜೆ ಹಾಕಿದಾಗ ಮುದುಕ, ತಾನು ಕುಳಿತುಕೊಳ್ಳಬೇಕಾಗಿದೆ, ಪಣಿಕ್ಕರನನ್ನು ಕರೆಸಬೇಕೆಂದೂ ಹೇಳಿದರು.

ಪಣಿಕ್ಕರ್ ಬಂದ ಮೇಲೆ ಆ ದಿವ್ಯದೇಹವನ್ನು ಎತ್ತಿ ಕುಳಿತುಕೊಳ್ಳಿಸಿದರು. ತನ್ನ ಬಲಹೀನ ಪಾದಗಳನ್ನು ಚಕ್ಕಳಮಕ್ಕಳ ಹಾಕಿ ಪದ್ಮಾಸನದಲ್ಲಿ ಕುಳಿತ ಅವರು ಮೇಲಕ್ಕೆ ದೃಷ್ಟಿನೆಟ್ಟು ಏಕಾಗ್ರತೆಯಿಂದ ಕುಳಿತಿದ್ದು ಅರ್ಧಗಂಟೆಯೊಳಗೆ ಕಣ್ಣುಮುಚ್ಚಿದರು.

ಅವರೇ ಚಟ್ಟಂಬಿ ಸ್ವಾಮಿ. ಇದು ಅವರ ಸಮಾಧಿ ಸಂದರ್ಭ. ಬ್ರಹ್ಮಜ್ಞಾನದ ಉಜ್ವಲ ಬೆಳಕಾಗಿದ್ದ ಪರಮ ಭಟ್ಟಾರಕ ವಿದ್ಯಾಧಿರಾಜ ಶ್ರೀ ಚಟ್ಟಂಬಿ ಸ್ವಾಮಿ ತೀರ್ಥಪಾದರು; 1924 ರ ಮೇ ತಿಂಗಳು ಐದನೇ ತಾರೀಕಿನಂದು ಮರೆಯಾದರು. ಹೀಗೆ ಕೇರಳದ ಸಾಂಸ್ಕೃತಿಕ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ಈ ಸ್ವಾಮಿಗಳ ಹೆಸರು ಶಾಶ್ವತ ಮುದ್ರೆಯಾಯಿತು.

## ಆಧುನಿಕ ರಂತಿದೇವ

ಕೇರಳ ಚರಿತ್ರೆಯಲ್ಲಿ ಇಂತಹುದೇ ಮಹತ್ವದ ಇನ್ನೊಂದು ದಿನ – 1853 ಆಗೋಸ್ತು 11. ಅದು ಈ ಅವತಾರ ಪುರುಷನ ಜನ್ಮದಿನ. ಜನ್ಮದಿನ ಭರಣಿಯಾದರೆ ನಿರ್ವಾಣ ಕೃತ್ತಿಕಾ ನಕ್ಷತ್ರ.

ತಿರುವನಂತಪುರದ ಕಣ್ಣಮ್ಮೂಲೆಯ ಕೊಲ್ಲೂರು ಗ್ರಾಮದ ಉಳ್ಳೂರ್‌ಕೋಟ್ಟು ಮನೆ. ನಜ್ಜಮ್ಮ ಪಿಳ್ಳೆ ಹಾಗೂ ವಾಸುದೇವ ಶರ್ಮರ ಮಗನಾಗಿ ಅಯ್ಯಪ್ಪನ್ ಪಿಳ್ಳೆ ಜನಿಸಿದ. ಆದರೆ ಕುಞ್ಞನ್ ಎಂಬ ವಾತ್ಸಲ್ಯದ ಹೆಸರೇ ವಾಡಿಕೆಯಾಗಿ ಉಳಿಯಿತು.

ಹುಟ್ಟು ಬಡತನದ ಮಹಾತಾಯಿಯ ಮಗು ಮಹಾಪ್ರಭುವಾಗುತ್ತಾನೆಂದು ಜಾತಕ ಸೂಚಿಸಿತು. ಕುಞ್ಞನಿಗೆ ವೇಲಾಯುಧನ್ ಎಂಬ ಸೋದರನೂ ವಾಣಿ ಎಂಬ ಸಹೋದರಿಯೂ ಹುಟ್ಟಿದರು. ವೇಲಾಯುಧನ್ ಮಾತ್ರ ಚಿಕ್ಕ ವಯಸ್ಸಿನಲ್ಲಿ ಮೃತನಾದ.

ಕುಞ್ಞನನ್ನು ಶಾಲೆಗೆ ಕಳುಹಿಸುವುದಕ್ಕೆ ಆ ಬಡವಳಿಂದ ಸಾಧ್ಯವಾಗಲಿಲ್ಲ. ಆದರೆ ಆರೇಳು ವಯಸ್ಸಿಗೇ ಆ ಮಗು ಅಪಾರ ಭೂತದಯೆ, ಪ್ರೀತಿ ವಾತ್ಸಲ್ಯಗಳ ತವನಿಧಿಯಾಗಿ ಶೋಭಿಸತೊಡಗಿತು.

ಅಜ್ಜಿ ಹಾಗೂ ಮೊಮ್ಮಗನ ನಡುವೆ ನಡೆದ ಒಂದು ಸಂಭಾಷಣೆಯಲ್ಲಿ ಕುಞ್ಞನ ಸ್ಥಿತಪ್ರಜ್ಞೆ ವ್ಯಕ್ತವಾದ ಸಂದರ್ಭ ಹೀಗಿದೆ –

ಅಜ್ಜಿ : ನಿನಗೆ ಪ್ರಾಯ ಹತ್ತಾಯಿತಲ್ಲ ಕುಞ್ಞಾ.ಹೀಗೆಹುಟ್ಟುಡುಗೆ ಯಾಕೆ?

ಕುಞ್ಞ : ಆ ಕೆಲಸ ಬೇಡಮ್ಮ. ಹಾಗಿದ್ದರೆ ಈ ಕೈ ಬೆರಳುಗಳನ್ನು ಅಡಗಿಸಬೇಡವೇ?

ಒಳಗೇ ಅಜ್ಜಿಗೆ ನಗುಬಂದರೂ ಬಡತನದ ನೆನಪು ನೋವುಕೊಟ್ಟಿತು.

ಬಾಲಕನನ್ನೂ ತನ್ನಮ್ಮನ ಬಡತನದ ನೋವು ಕಾಡತೊಡಗಿತು. ಪೋತ್ತಿಗಳೊಬ್ಬರ ಮಠದಲ್ಲಿ ಅವಳು ದುಡಿಯುತ್ತಿದ್ದಳು. ಆ ಮನೆಯವರಿಗೊಂದು ದೇವೀಗುಡಿಯಿತ್ತು. ಕುಞ್ಞ ಆ ಪರಿಸರದಲ್ಲಿದ್ದ ಗಿಡಬಳ್ಳಿಗಳಿಂದ ಹೂಗಳನ್ನು ಕೊಯ್ದು ದಿನಾ ಒಂದು ಮಾಲೆಯನ್ನು ಗುಡಿಗೆ ತರತೊಡಗಿದ. ಅದಕ್ಕೆ ಪ್ರತಿಫಲವಾಗಿ ಒಂದು ಮುದ್ದೆ ನೈವೇದ್ಯ ಸಿಗುತ್ತಿತ್ತು. ಹಾಗೆ ಅವನು ತನಗೆ ಬೇಕಾದ ಆಹಾರವನ್ನು ತಾನೇ ಸಂಪಾದಿಸಿಕೊಳ್ಳ ತೊಡಗಿದ!

ಸುಮಾರು 12 ನೇ ವಯಸ್ಸಿಗೆ ಕುಞ್ಞನ ಅಕ್ಷರಾಭ್ಯಾಸ ಆರಂಭವಾಯಿತೆನ್ನ ಬಹುದು. ನಾಡೋಜ ಪಾಠ ಹೇಳುತ್ತಿದ್ದ ಸಾಲೆಯ ಹೊರಗೆ ನಿಂತು ಕೇಳಿಸಿಕೊಂಡೇ ಅವನ ಜ್ಞಾನಕ್ಕೆ ಅಡಿಗಟ್ಟು ಆಯಿತು. ಸಾಲೆಯ ಸುತ್ತ ಅಲೆದಾಡಿ ಅಕ್ಷರ ಜ್ಞಾನವೂ ಹೆಚ್ಚಿತು. ದೂರ ಎಸೆದ ಹಳೆ ಓಲೆಗಳನ್ನು ಪಠಿಸಿ, ಅನುಕರಿಸುತ್ತ ಜೊತೆಗೆ ಪಾಠ ಕೇಳಿಸಿಕೊಂಡು ಉರು ಹೊಡೆಯುತ್ತ ಅವನು ಕುಶಾಗ್ರಮತಿಯೆನಿಸಿದ. ಅದನ್ನು ಕಂಡ ಗುರು ಅವನನ್ನು ಕರೆಸಿ ತನ್ನ ಇತರ ಶಿಷ್ಯರ ಜೊತೆಗೇ ಇರಗೊಟ್ಟ.

ಪ್ರಾಯ ಹದಿಮೂರು. ದಷ್ಟಪುಷ್ಟ ದೇಹ; ವಿಶಾಲ ವಕ್ಷಸ್ಥಳ, ಬಲಿಷ್ಠ ಕೈಗಳು. ಇವನನ್ನು ಮೇಸ್ತ್ರಿಗಳ ಸಹಾಯಕನಾಗಿಸಿದರೆ ಹೇಗೆ? ಅಂತಹ ಅವಕಾಶ ಅವನಿಗೆ ಲಭಿಸಿತು ಕೂಡಾ. ತಿರುವನಂತಪುರದಲ್ಲಿ ದೊಡ್ಡದೊಂದು ಆಫೀಸು ಕಟ್ಟಡದ ಕೆಲಸ ಆರಂಭವಾದಾಗ ಅಲ್ಲಿಗೆ ಅನೇಕ ಕೆಲಸಗಾರರ ಅಗತ್ಯ ಬಿತ್ತು. ಹಾಗೆ ಸ್ವಲ್ಪ ಕಾಲ ಕಲ್ಲುಹೊತ್ತ. ಆದರೆ ಕ್ರಮೇಣ ಅವನ ಅಲ್ಪ ಸ್ವಲ್ಪ ಧ್ಯಾನದ ದಿನಚರಿಗೆ ಅಡ್ಡಿಯಾದುದರಿಂದ ಕೂಲಿ ಕೆಲಸ ಬಿಟ್ಟುಬಿಟ್ಟ.

ಕುಞ್ಞನ ತಾಯಿಗೆ ಮೀನು ತುಂಬಾ ಇಷ್ಟ. ಆದರೆ ಮಗ ಅದರ ವಿರೋಧಿ. ಪ್ರಾಣಿಗಳನ್ನು ಹಿಂಸಿಸುವ ಅಧಿಕಾರವನ್ನು ಮನುಷ್ಯರಿಗೆ ಕೊಟ್ಟವರು ಯಾರು? ಪ್ರಾಣಿಗಳು ಕೂಡಾ ದೇವರ ಮಕ್ಕಳಲ್ಲವೆ? ಸಮಸ್ತ ಜೀವಜಾಲವೂ ಪರಸ್ಪರ ಬಂಧುಗಳಲ್ಲವೆ? ಹೀಗೆ ಚಿಂತಿಸತೊಡಗಿದ ಕುಞ್ಞ ತನ್ನ ವಿರೋಧ ವ್ಯಕ್ತಪಡಿಸುವುದಕ್ಕೆ ಸಮಯ ಕಾಯುತ್ತಿದ್ದ.

ಒಂದು ದಿನ ಮೀನು ತರುವಾಕೆ ಮನೆಗೆ ಬಂದಳು. ಬುಟ್ಟಿ ಇಳಿಸಿದ ಅವಳ ಹತ್ತಿರ ಬಂದು ನಜ್ಞಮ್ಮ ಪಿಳ್ಳೆ ಮೀನು ಖರೀದಿಸಿದಳು. ಮುಕ್ಕುವತಿ ಬುಟ್ಟಿಯನ್ನು ಕೆಳಗಿಳಿಸಿ ಮನೆಯೊಡತಿಯೊಂದಿಗೆ ಮಾತನಾಡುತ್ತಿದ್ದಳು. ಕುಞ್ಞ ಸಂದರ್ಭ ನೋಡಿ ಬುಟ್ಟಿಯ ಹತ್ತಿರ ಬಂದು ಅದಕ್ಕೆ ಮೂತ್ರಿಸಿಬಿಟ್ಟ! ಹಾಗೆ ಅವನ ಪ್ರತಿಭಟನೆಯ ಕಿಡಿಹೊತ್ತಿತು. ಇದನ್ನು ಗಮನಿಸಿದ ತಾಯಿ ರುದ್ರಾವತಾರ ತಾಳಿದಳು. ಬುಟ್ಟಿಯ ದೊಡ್ಡ ಮೀನೊಂದನ್ನು ಎತ್ತಿ ಮಗನ ಮುಸುಡಿಗೆ ಬಾರಿಸಿದಳು. ಆಳವಾದ ಗಾಯವಾಯಿತು. ಆ ಗಾಯದ ಗುರುತನ್ನು ಸ್ವಾಮಿ ಬದುಕಿನುದ್ದಕ್ಕೂ ಹೊತ್ತು ತಿರುಗುವ ಹಾಗಾಯಿತು. ಜೀವದಯೆ ತೋರಿದ್ದಕ್ಕೆ ಅಮ್ಮ ಕೊಟ್ಟ ಬಳುವಳಿಯೆಂದು ಅವರು ಆಗಾಗ ಹೇಳುತ್ತಿದ್ದರು. ಪ್ರೀತಿ, ಕರುಣೆ, ಜೀವದಯೆಗಳನ್ನು ಒಳಗೊಂಡ ಅವರ ಬಾಲಲೀಲೆಗಳು ಹೀಗೆ ವೈಶಿಷ್ಟ್ಯಗಳಿಂದ ಕೂಡಿದ್ದವು.

ಪೋತಿ ಮಠದ ಮಕ್ಕಳಿಗೆ ಸಂಸ್ಕೃತ ಕಲಿಸುತ್ತಿದ್ದ ಗುರುವಿಗೆ ಈ ಹುಡುಗನ ಮೇಲೆ ಕರುಣೆ ಮೂಡಿದ್ದರಿಂದ ಅವನೂ ಉಳಿದವರೊಂದಿಗೆ ಕುಳಿತು ಸಂಸ್ಕೃತ ಓದುವುದಕ್ಕೆ ಸಾಧ್ಯವಾಯಿತು. ಈ ಪ್ರವೇಶಕ್ಕೆ ಮೊದಲು ಗುರು ಒಂದು ಪರೀಕ್ಷೆಯನ್ನು ನಡೆಸಿದ್ದರು. ಅವನನ್ನು ಹತ್ತಿರ ಕರೆದು ಕೆಲವು ಪ್ರಶ್ನೆಗಳನ್ನು ಮುಂದಿಟ್ಟರು. *ಎಲ್ಲಕ್ಕೂ ಅರಗಿಳಿಯಂತೆ* ಮಿಂಚಿನ ಉತ್ತರ! ಪೋತಿಯ ಮಕ್ಕಳಲ್ಲೂ ಕಾಣದ ಪ್ರತಿಭೆ! ಶಾಸ್ತ್ರಿಯ ಕರುಳಲ್ಲಿ ಕರುಣೆಯ ಪ್ರವಾಹದ ಕಟ್ಟೆಯೊಡೆಯಿತು. ಕೇವಲ ಶೂದ್ರನೆಂದು ಇವನನ್ನು ನೂಕಲಾಗದೆಂದು ತಿಳಿದರು. ಏಕಪಾಠಿಯಾಗಿದ್ದ ಹೊಸಶಿಷ್ಯನಿಗೆ ಅವರು ಮಣೆ ಹಾಕಿದರು.

ದಿನಗಳು ಉರುಳಿದಂತೆ ಇವನಿಗೆ ತನ್ನಿಂದ ದೊರಕುವ ವಿದ್ಯೆ ಸಾಲದೆಂದು ಗುರುವಿಗೆ ತೋಚಿತು. ಉನ್ನತ ಶಿಕ್ಷಣ ನೀಡಬಲ್ಲ ಗುರುವನ್ನು ಹುಡುಕತೊಡಗಿದರು. ನಜ್ಞಮ್ಮ ಪಿಳ್ಳೆಯೊಂದಿಗೆ ಸಮಾಲೋಚನೆ ನಡೆಸಿದರು. ಅವಳ ಅಕ್ಕನ ಮಗ ಕೃಷ್ಣಪಿಳ್ಳೆಯ ಮನೆಗೆ ಕಾಲಿಟ್ಟರು. ಕುಞ್ಞನ ವಿಚಾರವನ್ನು ಅವನ ಕಿವಿಗೆ ಹಾಕಿದರು. ಹಾಗೆ ಪೇಟೆ ರಾಮನ್ ಪಿಳ್ಳೆ ಆಶಾನ್ ಬಳಿಗೆ ಕುಞ್ಞ ಹೋಗುವಂತಾಯಿತು. ಶಾಲೆಯ ಇತರ ಮಕ್ಕಳಿಗಿಂತ ಇವನು ಮುಂದಿದ್ದಾನೆಂದು ಅವರಿಗೂ ಭಾಸವಾದುದರಿಂದ ಅವನನ್ನು ಶಾಲೆಯ ಚಟ್ಟಂಬಿಯಾಗಿ (ಲೀಡರ್) ನೇಮಿಸಿದರು! ಮೇಷ್ಟರು ಇಲ್ಲದಾಗ ಕಲಿಸಲೂ ಬಲ್ಲನೆಂಬ ಮರ್ಯಾದೆಯ ಮಾತು ಮತ್ತು ಸಾಥಿನ 'ಚಟ್ಟಂಬಿ'ಯದ್ದು. ಇಂತಹ ಸರ್ವಜ್ಞ ಹಾಗೂ ಪರಿಪೂರ್ಣ ಕಲಾನಿಧಿಯಾದ ಕುಞ್ಞನ ಬಗ್ಗೆ ಆಶಾನ್ ಹೀಗೆ ಬರೆದಿದ್ದಾರೆ. –

"ಕುಞ್ಞನ್ ಪಿಳ್ಳೆಗೆ ಯಾವನೋ ಗುರು ಅಕ್ಷರಾಭ್ಯಾಸ ಮಾಡಿಸಿದರು. ಆದರೆ ಅವನು ನನಗೂ ಶಿಷ್ಯನಾಗಿದ್ದ. ಸ್ವಲ್ಪ ಹಿರಿಯ ವಿದ್ಯಾರ್ಥಿಯೂ ಬುದ್ಧಿವಂತನೂ ಆಗಿದ್ದನೆಂದೇ ಆತನನ್ನು ಶಾಲೆಯ ಚಟ್ಟಂಬಿಯಾಗಿ ಮಾಡಿದೆ. ಕುಞ್ಞನ್ ಪಿಳ್ಳೆಗೆ ಚಟ್ಟಂಬಿ ಎಂಬ ಹೆಸರಾದದ್ದು ಹಾಗೆ. ನನ್ನಿಂದ ಅವನೇನು ಕಲಿತನೋ ಗೊತ್ತಿಲ್ಲ. ಮುಖ್ಯವಾಗಿ ಸಂಗೀತ ಕಲಿಸಿದ್ದೆ. ಕಿಳಿಪ್ಪಾಟ್ಟ್ ರಾಮಾಯಣ, ಭಾರತಗಳ ಹಲವು ಭಾಗಗಳನ್ನು ಆಯಾ ವೃತ್ತಗಳನ್ನು ಗೌರವಿಸಿ ಓದುತ್ತಿದ್ದುದಿತ್ತು. ಕೆಲವು ಯುವಕರು ಇದನ್ನು ಕೇಳುವುದಕ್ಕಾಗಿ ಬರುತ್ತಿದ್ದರು. ಅವರಿಗೆ ಇವನೇ ಓದಿಸುತ್ತಿದ್ದ. ನಮ್ಮ ಮನೆಯ ಒಬ್ಬ ಸದಸ್ಯನಂತಿದ್ದು ಹೆಚ್ಚಿನ ಸಮಯ ನನ್ನಲ್ಲೇ ಕಳೆಯುತ್ತಿದ್ದ. ಅವನು ಸಂಗೀತದಲ್ಲಿ ನಿಷ್ಣಾತನೇ. ಶಾರೀರ ಸ್ತ್ರೀಯರ ಹಾಗೆ. ನನ್ನ ಜೊತೆ ಕಲಿಯುತ್ತಿದ್ದಾಗ ಹೆಚ್ಚು ಕಡಿಮೆ ಅವನ ವಯಸ್ಸು ಹದಿನೈದು."

ಅಯ್ಯಪ್ಪ, ಕುಞ್ಞನ್, ಕುಞ್ಞನ್ ಪಿಳ್ಳೆ ಎಂಬಿತ್ಯಾದಿ ಹೆಸರುಗಳು ಈ ಅವತಾರ ಪುರುಷನಿಗೆ ಯಾವಾಗ ಬಂತೆಂಬುದು ಈಗ ಅರಿವಾಗಿರಬೇಕಲ್ಲವೆ?

# ಭವಿಷ್ಯದ ಭಟ್ಟಾರಕ

ಭವಿಷ್ಯಕ್ಕೆ ಸಲ್ಲುವ ಬಾಲ್ಯ ಹೊಂದಿದ ಕುಞ್ಞನ್ ಬದುಕು ತುಂಬಾ ಸ್ವಾರಸ್ಯಕರ.

ಕುಞ್ಞನ್ ಪಿಳ್ಳೈ ಚಟ್ಟಂಬಿ ತನ್ನ ಸಹಪಾಠಿಗಳೊಂದಿಗೆ ಗುರುವಿನ ಮನೆಯಲ್ಲಿಯೆ ವಾಸಿಸುತ್ತಿದ್ದ. ಮಧ್ಯರಾತ್ರಿಯ ವೇಳೆ ಅವನು ಗುಂಪಿನಿಂದ ಬೇರೆಯಾಗುತ್ತಿದ್ದ. ಇದನ್ನು ಸಹಪಾಠಿಗಳು ಗಮನಿಸಿ ಸಂದೇಹಗೊಂಡರು. ಚಟ್ಟಂಬಿಗೆ ಒಂದು ಪಾಠ ಕಲಿಸಬೇಕೆಂದು ಅವರು ಒಗ್ಗಟ್ಟಾದದ್ದಲ್ಲದೆ ಆಶಾನ್‌ಗೂ ಈ ವಿಷಯವನ್ನು ಗುಟ್ಟಾಗಿ ಸೂಚಿಸಿದರು. ಯೌವನಕ್ಕೆ ಕಾಲಿಡುತ್ತ ಕೆಲವೆಲ್ಲ ದುರ್ಬುದ್ಧಿಗಳು ಸಹಜ ತಾನೆ? ಚಟ್ಟಂಬಿಯ ಬಗ್ಗೆ ಹಾಗೆಲ್ಲ ಸಂಶಯ ಪಡುವುದು ಆಶಾನ್‌ಗೆ ಈವಿಷಯದಲ್ಲಿ ಕುತೂಹಲವಿದ್ದದ್ದು ಸಹಜವೇ. ಹಾಗಾಗಿ ಗುಟ್ಟನ್ನು ಕಂಡುಹುಡುಕುವಂತೆ ಅವರು ಶಿಷ್ಯರಿಗೆ ಸೂಚಿಸಿದರು. ಇದರಿಂದ ಉತ್ಸಾಹಗೊಂಡ ಗೆಳೆಯರು ಹೊಂಚುಹಾಕತೊಡಗಿದರು.

ಎಲ್ಲರೂ ನಿದ್ರಿಸಬೇಕಾದ ರಾತ್ರಿ ಮೀರಿದ ವೇಳೆ. ಅರೆನಿದ್ದೆಯಲ್ಲಿದ್ದ ಶಿಷ್ಯನೊಬ್ಬ ಕುಞ್ಞನ್ ಮಲಗಿದ್ದ ಚಾಪೆ ಖಾಲಿಯಾಗಿರುವುದನ್ನು ಗಮನಿಸಿದ. ಪಕ್ಕದಲ್ಲಿದ್ದವರನ್ನೂ ಎಬ್ಬಿಸಿದ. ಕಗ್ಗತ್ತಲೆಯಲ್ಲಿ ಅವರು ಚಿಕ್ಕಗುಂಪುಗಳಾಗಿ ಸೂಟೆಗಳೊಂದಿಗೆ ಹೊರಟರು. ಅಲ್ಲಲ್ಲಿ ಹುಡುಕಾಡಿ ಕೊನೆಗೆ ಕೆಲವು ಮನೆಗಳಿಗೂ ಹೋಗಿ ನೋಡಿ ಸೋತವರೇ ಹಿಂತಿರುಗೋಣವೆಂದು ನಿರ್ಧರಿಸಿದರು. ಆಗ ಅವರಲ್ಲೊಬ್ಬ ಹೇಳಿದ –

"ಅಲ್ಲಿ ಆ ಮಂದ ಬೆಳಕಿನಲ್ಲಿ ಕಾಣುವ ಮುರಿದು ಬಿದ್ದ ಕಾಳೀಗುಡಿ ಇದೆಯಲ್ಲ, ಸುತ್ತಲೂ ಇರುವ ಪಾಲೆಮರದ ಮೇಲೆ ಯಕ್ಷಿಗಳು ವಾಸಿಸುತ್ತಿವೆಯೆನ್ನುತ್ತಾರಲ್ಲ. ಜನರು ಹಗಲೇ ಸುಳಿಯುವುದಕ್ಕೆ ಭಯಪಡುವ ಆ ಪ್ರದೇಶವನ್ನೆ ಕುಞ್ಞ ತನ್ನ ದುರ್ವ್ಯಸನಗಳಿಗೆ ಆಯ್ದುಕೊಂಡಿರಲಾರನೇಕೆ? ಬನ್ನಿ ಅಲ್ಲಿಗೆ ಒಮ್ಮೆ ಹೋಗಿ ಬರೋಣ. ಹೇಗೂ ಸೂಟೆಯ ಬೆಳಕುಂಟು. ಯಕ್ಷಿಗಳು ನಮ್ಮನ್ನೇನೂ ಮಾಡಲಾರವು".

ಗುಂಪಿನಲ್ಲಿದ್ದ ಪುಕ್ಕರೂ ಉಳಿದವರ ಧೈರ್ಯ ನೋಡಿ ಮೌನವಾಗಿದ್ದರು. ಹಾಗೆ ಎಲ್ಲರೂ ಸೇರಿ ಕಳ್ಳನನ್ನು ಹಸಿಯಾಗಿಯೇ ಹಿಡಿಯುತ್ತೇವೆಂಬ ಉತ್ಸಾಹದಿಂದ ಅತ್ತ ಸರಿದರು. ಆಗ ಅವರು ಕಂಡ ದೃಶ್ಯವೇನು! ಆ ಭಯ ಹುಟ್ಟಿಸುವ ಮುರಿದ ಗುಡಿಯ ಭೀಕರ ಕಾಳೀ ವಿಗ್ರಹದ ಮುಂದೆ ಚಟ್ಟಂಬಿ ಕಣ್ಣುಮುಚ್ಚಿ ಕುಳಿತಿದ್ದಾನೆ! ಧ್ಯಾನ ಎಷ್ಟು ಗಾಢವಾಗಿತ್ತೆಂದರೆ ಮುಖಕ್ಕೆ ಬಿದ್ದ ಬೆಳಕಿನಿಂದಲೂ ಎಚ್ಚರ ಬರಲಿಲ್ಲ. ನಾಚಿಕೆ, ಹೇಸಿಗೆ, ಭಯ ಬೆರಗುಗಳಿಂದ ಸ್ತಬ್ಧರಾದ ಸಹಪಾಠಿಗಳೆಲ್ಲ ಅಲ್ಲಿಂದ ಮೌನವಾಗಿ ಕಾಲ್ಕಿತ್ತರು. ತಂತಮ್ಮ ಚಾಪೆಯ ಮೇಲೆ ಬಿದ್ದುಕೊಂಡರು. ಕುಞ್ಞ ಕೂಡಾ ಅರ್ಧರಾತ್ರಿ ಕಳೆದು ಬ್ರಾಹ್ಮೀ ಮುಹೂರ್ತಕ್ಕೆ ಮುಂಚಿತವಾಗಿ ಮರಳಿದ್ದ!

ಬೆಳಗಾಯಿತು. ನಡೆದ ಘಟನೆ ಹೊರಗೆ ಮಾತನಾಡಿ ಕೊಳ್ಳುವಂಥಾದ್ದಲ್ಲ ತಾನೆ? ಆದರೆ ಕಂಡದ್ದನ್ನು ಕಂಡಹಾಗೆ ಗುರುಗಳ ಕಿವಿಗೆ ಹಾಕಿಯೇ ಬಿಟ್ಟರು. ಬೆರಗಾದ ಆಶಾನ್ ಅವರು, ಮುಂದೆ ಯೋಗೇಶ್ವರನೋ ಯೋಗೀಶ್ವರನೋ ಆಗಬಲ್ಲ ಚಟ್ಟಂಬಿಯನ್ನು ಮನಸ್ಸಿನಲ್ಲೆ ಊಹಿಸಿಕೊಂಡರು.

## ಷಣ್ಮುಖ ದಾಸ

ಚಟ್ಟಂಬಿಯಾಗಿ ಕುಞ್ಞನ್ ತನ್ನ ಗುರು ರಾಮನ್ ಪಿಳ್ಳೆಯ ಬಳಿಯಲ್ಲಿದ್ದಾಗ ಸಂದರ್ಭ ನೋಡಿ ಕೊಲ್ಲೂರಿಗೂ ಹೋಗಿ ಬರುತ್ತಿದ್ದ ನಡುವೆ ಕುಞ್ಞನ ಬದುಕಿನ ಮೊದಲ ತಿರುವೊಂದು ಆಕಸ್ಮಿಕವಾಗಿ ಘಟಿಸಿತು. ಅವನು ಕೊಲ್ಲೂರಿನಲ್ಲಿ ದೇವೀ ದರ್ಶನ ಮಾಡುತ್ತಿದ್ದ ವೇಳೆ ಕಾಷಾಯ ವಸನಧಾರಿಯೊಬ್ಬ ಪಕ್ಕದಲ್ಲಿ ಕಾಣಿಸಿಕೊಂಡರು. ಸನ್ಯಾಸಿಯ ರೂಪದಲ್ಲಿರುವವರ ಬಗ್ಗೆ ಅವನಿಗೆ ಗೌರವವಿದ್ದುದರಿಂದ ವ್ಯಕ್ತಿಯನ್ನು ಹಿಂಬಾಲಿಸಿದ. ಸನ್ಯಾಸಿಯಾದರೊ ಅಲ್ಲಿಂದ ತಪ್ಪಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದರು. ಇದನ್ನು ತಿಳಿದ ಕುಞ್ಞ, "ನನಗೇನಾದರೂ ಕೊಡುತ್ತೀರಾ"ಎಂದು ಕೇಳಿಕೊಂಡ. "ಅಯ್ಯಪ್ಪೋ ಖಾಲಿ ಕೈ ತಿರುಗಾಡಿ ನಾನು, ನಿನಗೇನು ಕೊಡಬಲ್ಲೆ? ಆದರೂ ಕೇಳಿದ್ದೀಯಲ್ಲ ಹಿಡಿದುಕೋ. ಇದೊಂದು ಮಂತ್ರ. ಇದರಿಂದ ಬೇಕಾದ್ದೆಲ್ಲ ಸಂಪಾದಿಸುವೆ" ಎನ್ನುತ್ತ ಅವನ ಕಿವಿಯಲ್ಲಿ ಬಾಲಸುಬ್ರಹ್ಮಣ್ಯ ಮಂತ್ರವನ್ನು ಉಸುರಿದ ತಕ್ಷಣ ಮರೆಯಾದರು.

ಈ ಸನ್ಯಾಸಿಯನ್ನು ಅಗಸ್ತ್ಯ ಮಹರ್ಷಿಯೆಂದೂ, ಸುಬ್ರಹ್ಮಣ್ಯನೆಂದೂ ವಿವಿಧವಾಗಿ ಭಾವಿಸುವವರುಂಟು. ಏನೇ ಆಗಲಿ ಅಗತ್ಯವಿದ್ದುದು ಸಿಕ್ಕಿತೆಂದು ಕುಞ್ಞ ಕೃತಾರ್ಥತೆಯಲ್ಲಿ ಮುಳುಗಿದ. ತಿಂಗಳುಗಟ್ಟಲೆ ಅದನ್ನೆ ಜಪಿಸಿ ಸಿದ್ಧಿ ಪಡೆದ. ಅವನು ಧ್ಯಾನಿಸಿದ ಸ್ಥಳ ಕರಮನಯಾರಿನ ಮಳಲದಂಡೆ. ಧ್ಯಾನಿಸಿದ ಹೊತ್ತೆಂದರೆ ಅಸಂಖ್ಯ ನೀರವ ರಾತ್ರಿಗಳು. ಅಲ್ಲಿಯ ಹಿರೀಕರೊಬ್ಬರಲ್ಲಿ ಮಳಲದಂಡೆಯ ಮೇಲೆ ಕುಳಿತು ಧ್ಯಾನ ಮಾಡುವುದು ತನಗೆ ತುಂಬ ಇಷ್ಟ ಎಂದು ಗುಟ್ಟಿನಲ್ಲಿ ಹೇಳಿದ್ದನಂತೆ!

ಬಾಲಸುಬ್ರಹ್ಮಣ್ಯ ಮಂತ್ರದ ಒಂದು ವೈಶಿಷ್ಟ್ಯವನ್ನು ಇಲ್ಲಿ ನೆನೆಯಬೇಕು. ಅದು ಹದಿನಾಲ್ಕು ಅಕ್ಷರಗಳುಳ್ಳ ಒಂದು ಅದ್ಭುತ ಮಂತ್ರ. ಶ್ರೀ ನಾರಾಯಣ ಗುರು ನೀಲಕಂಠ ತೀರ್ಥಪಾದರು, ತೀರ್ಥಪಾದ ಪರಮಹಂಸರೆಂಬ ಮೂವರೇ ಸನ್ಯಾಸಿ ಶಿಷ್ಯರು ಈ ಮಂತ್ರೋಪದೇಶ ಪಡೆದರಂತೆ. ಅದರ ಸಿದ್ಧಿಯಾಗಬೇಕಾದರೆ ಹದಿನಾಲ್ಕು ಲಕ್ಷ ಬಾರಿ ಜಪಿಸಬೇಕಾಗಿತ್ತು. ಕುಞ್ಞನ ಶ್ರಮದ ತೀವ್ರತೆ ಮತ್ತು ನಿಷ್ಠೆಯನ್ನು ನಮಗೆ ಇಲ್ಲಿ ಊಹಿಸಬಹುದು. ಹೀಗೆ ಈ ಬಾಲಸುಬ್ರಹ್ಮಣ್ಯ ಮಂತ್ರಾಭ್ಯಾಸ ಆಧ್ಯಾತ್ಮಿಕ ರಂಗಕ್ಕೆ ಮೊತ್ತ ಮೊದಲ ದೃಢವಾದ ಹೆಜ್ಜೆಯೆನಿಸಿತು. ಅವತಾರದ ಗುರಿಯ ಈಡೇರಿಕೆಗೂ ಇದೇ ಮೊದಲ ಹೆಜ್ಜೆಯಾಯಿತೆನ್ನಬೇಕು.

ತಾನು ಶ್ರೀ ಸುಬ್ರಹ್ಮಣ್ಯನ ಉಪಾಸಕ ಎಂಬುದಕ್ಕಾಗಿ ಅವರು ಷಣ್ಮುಖದಾಸ ಎಂಬ ಅಂಕಿತವನ್ನೂ ಸ್ವಯಂ ಸ್ವೀಕರಿಸಿದರು.

## ಸಾಮಾಜಿಕ ಕ್ರಾಂತಿಯ ಆರಂಭ

ಕುಞ್ಞನ್ ಇನ್ನೂ ಅದೇ ಆಶಾನ್ ಶಾಲೆಯ ವಿದ್ಯಾರ್ಥಿ. ಮುಕ್ತ ಮನಸ್ಸಿನ ಆ ಬಾಲಕನಿಗೆ ಕೆಲವರಾದರೂ ಗೆಳೆಯರಿದ್ದರು. ಅಂಥವರಲ್ಲಿ ಬಿಲ್ಲವ ಸಮಾಜದವರೂ ಇದ್ದರು. ಆಗಾಗ ಅಂಥವರ ಮನೆಗಳಿಗೆ ಹೋದವನು ಆಹಾರವನ್ನೂ ಸ್ವೀಕರಿಸುತ್ತಿದ್ದ. ಅಂದಿನ ಸಂಪ್ರದಾಯಸಥಿರಿಗೆ ಅದು ಸಹಿಸದ ವಿಷಯವಾಗಿತ್ತು. ಗುರುಗಳೂ ಅದನ್ನು ಒಪ್ಪುವವರಲ್ಲ. "ಅಲ್ಲಿ ಇಲ್ಲಿ ಹೋಗಿ ಆಹಾರ ಸ್ವೀಕರಿಸುತ್ತೀಯಂತೆ ಅದು ಸರಿಯಾ?" ಎಂದು ಒಮ್ಮೆ ಚಟ್ಟಂಬಿಯನ್ನು ಪ್ರಶ್ನಿಸಿದರು.

"ನಾನು ಇಲ್ಲೂ ತಿನ್ನುತ್ತೇನಲ್ಲ" ಎಂದು ಅವನು ಉತ್ತರಿಸಿದ. ಕುಞ್ಞನ್ ಉತ್ತಮ ನಾಯರ್ ಮತ್ತು ಗುರುಗಳು ಸ್ವಲ್ಪ ಕೆಳಗಿನವರೆಂಬ ಧ್ವನಿ ಅದರ ಹಿಂದೆ ಇತ್ತು! ಇನ್ನೊಮ್ಮೆ ಆಶಾನ್ ಅಂತಹ ಪ್ರಶ್ನೆ ಕೇಳಲಿಲ್ಲ. ಇಷ್ಟರಲ್ಲೆ ಕುಞ್ಞನಿಗೆ ಹಲವಾರು ಹೆಸರುಗಳಾದುವು. ಅಯ್ಯಪ್ಪನ್, ಕುಞ್ಞನ್ ಚಟ್ಟಂಬಿ, ಚಟ್ಟಂಬಿ ಕುಞ್ಞನ್ ಪಿಳ್ಳೆ, ಷಣ್ಮುಖದಾಸನ್. ಒಂದೊಂದರ ಹಿನ್ನೆಲೆಯೂ ಬೇರೆ!

ಹದಿನಾರು ವರ್ಷ ತುಂಬುವಷ್ಟರಲ್ಲೆ ಅವನು ಮಲೆಯಾಳ ಮತ್ತು ತಮಿಳು ಭಾಷೆಗಳ ಅನೇಕ ಗ್ರಂಥಗಳನ್ನಲ್ಲದೆ ಇತರ ಧಾರ್ಮಿಕ ಗ್ರಂಥಗಳನ್ನೂ ಓದಿ ಮುಗಿಸಿದ್ದ. ಸಂಸ್ಕೃತದಲ್ಲೂ ಅಗಾಧ ಜ್ಞಾನ ಸಂಪಾದಿಸಿದ. ಲೆಕ್ಕ ಹಾಗೂ ಸಂಗೀತಗಳಲ್ಲೂ ಪ್ರವೀಣನೆ. ಸಾಲದ್ದಕ್ಕೆ ಸುಂದರ ಕೈಬರಹವೂ ಇತ್ತು. ನವಯುವಕನಾಗುತ್ತಿದ್ದಂತೆ ಮಂತ್ರ ಸಿದ್ಧಿ, ಪ್ರಾಣಿದಯೆ ಹಾಗೂ ಹಾಸ್ಯಚಾಟೂಕ್ತಿ ನಿಪುಣನಾಗಿ ಮಾರ್ಪಟ್ಟ. ಪ್ರತಿಭಾವಂತನೆಂದು ಎಲ್ಲರಿಂದಲೂ ಗುರುತಿಸಲ್ಪಟ್ಟ. ಮನೆಯ ಬಡತನ ಇದಾವುದಕ್ಕೂ ಅಡ್ಡಿಯಾಗಲೂ ಇಲ್ಲ. ಶಿವನೇ ದಿಗಂಬರನೆಂದ ಮೇಲೆ!

ಅವನ ಅಂದದ ಕೈಬರಹ ಮತ್ತು ಗಣಿತ ಜ್ಞಾನ ನೋಡಿದ ಕೊಲ್ಲೂರು ಮಠದ ಪೋತಿಗಳು ತಮ್ಮಕೋಶಾಧಿಕಾರಿಯಾಗಿ ನೇಮಿಸಿಕೊಂಡರು. ಅದನ್ನು ಚೆನ್ನಾಗಿಯೇ ನಿರ್ವಹಿಸಿದ. ಉಳಿದ ವೇಳೆಯನ್ನು ಜ್ಞಾನಾರ್ಜನೆಗಾಗಿ ಬಳಸಿದ. ಇದರಲ್ಲಿ ಅವನಿಗಿದ್ದ ಒಂದೇ ಅಡ್ಡಿಯೆಂದರೆ ಬ್ರಾಹ್ಮಣರು. ವೇದ, ಉಪನಿಷತ್ತು, ಮಂತ್ರತಂತ್ರಗಳೆಲ್ಲ ಅವರ ಸೊತ್ತಾಗಿದ್ದುವು. ಅವುಗಳಲ್ಲಿ ಏನು ಹೇಳಿದೆ ಎಂಬುದನ್ನು ತಿಳಿಯುವುದಕ್ಕೂ ಉಳಿದವರಿಗೆ ಅಧಿಕಾರವಿರಲಿಲ್ಲ. ಇಂತಹ ಸಾಮಾಜಿಕ ಅಸಮತೆಗೆ ಪರಿಹಾರ ಕಾಣುವ ಸದಿಚ್ಛೆಯೇ ಅವನ ಆಕಾಂಕ್ಷೆಯಾಗಿ ಪರಿಣಮಿಸಿತು.

**ಘಟದೀಪ** : ಮೊದಲು ಜೀವನೋಪಾಯಕ್ಕಾಗಿ ಲೆಕ್ಕ ಬರೆಯುವ ಕೆಲಸ ನೋಡಿದರೂ ಭವಿಷ್ಯದ ಪಾರ್ಥಸಾರಥಿ ಎಷ್ಟುಕಾಲ ತಾನೇ ಗೋಕುಲದಲ್ಲಿ ದನ

ಮೇಯಿಸಿಯಾನು ಎಂಬಂತಾಯಿತು. ಆ ಕೆಲಸ ಬಿಟ್ಟನಾದರೂ ತಾಯಿ ಮತ್ತು ಸಹೋದರಿಯ ಬಡತನ ನೋಡಿ ಮತ್ತೊಮ್ಮೆ ಅಣ್ಣ ಕೃಷ್ಣ ಪಿಳ್ಳೆಯೇ ಸಹಾಯಕ್ಕೆ ಬಂದ. ತಾಯಿಗೆ ನೆರವಾಗಬೇಕಾದ ತಾನು ಕರ್ಮಬಂಧನ ಸ್ವೀಕರಿಸಿ ಅಣ್ಣನೊಂದಿಗೆ ನೈಯ್ಯಾಟ್ಟಿಂಗರಕ್ಕೂ ಹೋದದ್ದಾಯಿತು.

ಅಲ್ಲಿ ಷಣ್ಮುಖಸುಂದರಂ ಪಿಳ್ಳೆ ಎಂಬ ಸುಬ್ರಹ್ಮಣ್ಯೋಪಾಸಕರೂ ಆದ ರಿಜಿಸ್ಟ್ರಾರ್ ಇದ್ದರು. ಕುಞ್ಞನ್ ಪಿಳ್ಳೆಯ ಕುರಿತು ತಿಳಿದು ಅವರು ತುಂಬ ಸಂತೋಷಗೊಂಡರು. ಅಂದದ ಬರವಣಿಗೆ ದಸ್ತಾವೇಜು ಬರಹಕ್ಕೆ ಹೇಳಿಮಾಡಿಸಿದಂತಿದೆ ಅಂದುಕೊಂಡರು. ಈ ಹೊಸ ಯುವಕನಿಗೆ ಮರುದಿನವೇ ಎಂಟು ಕಾಸು ಪ್ರತಿಫಲವಾಗಿ ಸಿಕ್ಕಿತು. ಅದನ್ನು ಅಮ್ಮನಿಗೆ ಕಳುಹಿಸಿಕೊಟ್ಟದ್ದೂ ಆಯ್ತು. ಕುಞ್ಞನ ಸದ್ಗುಣಕ್ಕೆ ಮೆಚ್ಚಿದ ರಿಜಿಸ್ಟ್ರಾರರು ಕೆಲಸವಿರಲಿ ಇಲ್ಲದಿರಲಿ ಖಾಯಂ ಆಗಿ ಎಂಟುಕಾಸು ಕೊಡುತ್ತ ಬಂದರು. ಅವನಿಗೆ ಹೆಚ್ಚು ಹೆಚ್ಚು ಕೆಲಸವೂ ಸಿಕ್ಕಿತು. ಆದರೆ ಕಛೇರಿಯಲ್ಲಿದ್ದ ಅವನಂತಹ ಇತರ ಬರಹಗಾರರಿಗೆ ಬೇಕಷ್ಟು ಸಂಪಾದನೆ ಇಲ್ಲ ಎಂಬುದನ್ನು ಗಮನಿಸಿದ ಕುಞ್ಞ ತನ್ನ ಗಳಿಕೆಯಿಂದ ಅಷ್ಟಿಷ್ಟು ಹಣ ಹಸ್ತಾಂತರಿಸಿದ. ಅಣ್ಣನಾದ ಕೃಷ್ಣ ಪಿಳ್ಳೆಗೆ ಮಾತ್ರ ಈ ನಡತೆ ಇಷ್ಟವಾಗಲಿಲ್ಲ. ಹಾಗಾಗಿ ಅವನು ಒಂದುದಿನ ಇಂತಹ ಉದಾರತೆಯನ್ನು ಪ್ರಶ್ನಿಸಿದ.

"ಅಣ್ಣಾ ಅವರಿಗೆ ಹೊಟ್ಟೆಗಿಲ್ಲವಾದರೆ ನಾವೂ ಉಪವಾಸ ಬಿದ್ದದ್ದಕ್ಕೆ ಸಮನಲ್ಲವೆ" ಎಂದು ಪ್ರಶ್ನಿಸಿಬಿಟ್ಟ. ಆದರೆ ಅಣ್ಣನ ಸಿಟ್ಟನ್ನು ನೋಡಿ ಕಾಲಿಗೆ ಅಡ್ಡಬಿದ್ದು ಕ್ಷಮೆಯನ್ನೂ ಯಾಚಿಸಿದ.

ಪ್ರತಿಫಲವನ್ನು ಬಯಸದೆ ಇತರರನ್ನು ಪ್ರೀತಿಸುವ ಮತ್ತು ಮರುಕ ತಾಳುವ ಮಹಾತ್ಮ ಗುಣ ಕುಞ್ಞನಿಗೆ ಮೊದಲಿನಿಂದಲೇ ಹೀಗೆ ರೂಢಿಯಾಗಿ ಬಿಟ್ಟಿತ್ತು. ಎಲ್ಲೋ ಬೆಳಗಬೇಕಾದ ರತ್ನ ಹೀಗೆ ಮಣ್ಣಿನ ಕೊಡಪಾನದೊಳಗೆ ಅವಿತುಕೊಂಡಿತ್ತು!

## ನಿರ್ಭೀತಿ

ಈ ನಡುವೆ ಅಣ್ಣನಿಗೆ ನಾಗರಕೋಯಿಲಿಗೆ ವರ್ಗವಾಯಿತು. ಅಣ್ಣ ಹೋದನೆಂದು ತಮ್ಮನೂ ಹೊರಟುಬಿಟ್ಟ. ಅಲ್ಲೂ ಅಂತಹುದೇ ಕೆಲಸ ಸಿಕ್ಕಿತಾದರೂ ಹೆಚ್ಚು ದಿನ ದುಡಿಯಲಿಲ್ಲ. ಜೊತೆಗೆ ಅತೀವ ಬಿಸಿಲ ಬೇಗೆಯಿಂದಾಗಿ ಓಡಿಬಿಡೋಣವೆನ್ನಿಸಿತು. ಆದರೆ ತಮ್ಮನನ್ನು ತಿರುವನಂತಪುರಕ್ಕೆ ಕಳುಹಿಸಲು ಅಣ್ಣನ ಮನಸ್ಸು ಕೇಳಲಿಲ್ಲ. ಹಾಗೆ ಮತ್ತೆ ನೈಯ್ಯಾಟ್ಟಿಂಗರಕ್ಕೆ ಕಳುಹಿಸುವ ಯೋಚನೆ ಮಾಡಿದ. ಒಂದು ರಾತ್ರಿ ಆ ದಟ್ಟವಾದ ಕಾಡುದಾರಿ ಮೂಲಕ ನಡೆದೇ ಹೋಗುತ್ತೇನೆಂದು ಕುಞ್ಞ ಹೊರಟುಬಿಟ್ಟ. ಹಗಲು ಕೂಡಾ ನಡೆಯುವುದಕ್ಕೆ ಹೆದರಬೇಕಾದ ದಾರಿಯ ಬಗ್ಗೆ ಕುಞ್ಞನಿಗೆ ಯಾವ ಭಯವೂ ಇರಲಿಲ್ಲ! "ತೊಂದರೆಯಿಲ್ಲ ನನ್ನನ್ನು ಯಾರೂ ಹಿಡಿದು ತಿನ್ನಲಾರರು" ಎನ್ನುತ್ತ ಅಣ್ಣನಿಗೆ ಸಮಾಧಾನ ಹೇಳಿ ಬೀಳ್ಕೊಂಡವನು

ಮರುದಿನ ಬೆಳಗಾತ ನೈಯ್ಯಾಟ್ಟಿಂಗರಕ್ಕೆ ತಲುಪಿದ. ಆದರೆ ಅಲ್ಲಿ ಹೆಚ್ಚು ದಿನ ಉಳಿಯಲಿಲ್ಲ.

ಹುಟ್ಟಿನಿಂದ ಭಯವೆಂದರೇನೆಂದೇ ತಿಳಿಯದ ಸುಬ್ರಹ್ಮಣ್ಯ ಭಕ್ತ ಸ್ವಾಭಾವಿಕವಾಗಿಯೇ ಜ್ಞಾನಿಯಾಗಿ ಬೆಳೆದ. ಅವನೊಬ್ಬ ವೇದಾಂತಿಯಂತಿದ್ದ. ಋಷಿಗಳು ಹೇಳುವಂತೆ ಭಯಕ್ಕೆ ಕಾರಣ ದ್ವೈತವೇ ಹೊರತು ಅದ್ವೈತವಲ್ಲ.

ಕುಞ್ಞ ಹುಟ್ಟಿದ ಮನೆತನವೇ ಅಂಥಾದ್ದು. ಅವರಲ್ಲಿ ದೈವೀಕತೆ ಹಾಸುಹೊಕ್ಕಾಗಿತ್ತು. ಧಾರ್ಮಿಕ ಪುನರುಜ್ಜೀವನಕ್ಕಾಗಿ ಶಿವನೇ ಅವತರಿಸಿದನೆಂಬಂತೆ ಇದ್ದರು. ಆ ಕುಟುಂಬ ಅನೇಕ ಯೋಗೀಶ್ವರ, ತತ್ವಜ್ಞಾನಿ, ಪಂಡಿತರಿಗೆ ಹೆಸರಾಗಿತ್ತು. ಈಶ್ವರ ಪಿಳ್ಳೆ ಎಂಬವರು ಅವಧೂತ ಹರಿಹರ ಶಾಸ್ತ್ರಿಗಳ ಶಿಷ್ಯರಾಗಿದ್ದರು. ನಾರಾಯಣ ಮೌನಿ ಎಂಬ ಇನ್ನೊಬ್ಬ ಯೋಗೀಶ್ವರರು ಸ್ವಾತಿ ತಿರುನಾಳ್ ಮಹಾರಾಜರ ವಿದ್ವತ್ ಸಭೆಯ ಸದಸ್ಯರಾಗಿದ್ದರು. ಇನ್ನು ಉಮ್ಮಿಣಿ ಪಿಳ್ಳೆ ಆಶಾನ್ ಕೂಡಾ ಇದೇ ಕುಟುಂಬದ ಸದಸ್ಯರಾಗಿದ್ದರು. ಬಹುಶ: ಕುಞ್ಞನ್ ಈ ಪರಂಪರೆಯನ್ನು ಹೊತ್ತೇ ಭೂಮಿಗೆ ಬಂದವರು. ಹೀಗೆ ಜ್ಞಾನಿಗಳಿಗೆ ಸಹಜವಾದ ನಿರ್ಭೀತಿ ಮತ್ತು ಅದ್ವೈತಭಾವ ಅವನ ಆಧ್ಯಾತ್ಮಿಕ ಶಕ್ತಿಗೆ ಆಧಾರವೆನಿಸಿತು.

ಪೋನಿಯತ್ತ್ ಮನೆಯ ಒಂದು ಶಾಖೆ ಮರುಕಿಲ್ ಮಠದ ಮಲೆಯಾಳ ಬ್ರಾಹ್ಮಣರಲ್ಲಿ ಪರಿಚಾರಕ ವೃತ್ತಿಯಲ್ಲಿತ್ತು. ಈ ಮಠದ ಇನ್ನೊಂದು ಶಾಖೆ ಪೋನಿಯತ್ತ್ ಮನೆಯ ಒಂದು ಕುಟುಂಬವನ್ನು ಕಣ್ಣಮೂಲೆ ಕೊಲ್ಲೂರಿಗೆ ಕರೆದೊಯ್ದಿತ್ತು. ಅಲ್ಲಿ ಈ ಪರಿಚಾರಿಕೆಯವರು ಉಳ್ಳೂರ್‌ಕೋಟ್ಟ್ ಎಂಬ ಹೊಸಮನೆ ಕಟ್ಟಿಕೊಂಡರು. ನಙ್ಙಮ್ಮ ಪಿಳ್ಳೆ ಇದೇ ಕುಟುಂಬಕ್ಕೆ ಸೇರಿದವಳು. ಈ ಸ್ತ್ರೀರತ್ನ ಬ್ರಾಹ್ಮಣರ ಕುಟುಂಬದಲ್ಲಿ ಪರಿಚಾರಿಕೆಯಾದರು. ಮುಂದೆ ವಾಸುದೇವ ಶರ್ಮ ಎಂಬ ಆಢ್ಯ ಬ್ರಾಹ್ಮಣನ ಪತ್ನಿಯಾದ ಈಕೆ ಭಕ್ತಿ, ಆಧ್ಯಾತ್ಮ ಸೇವೆಗಳಲ್ಲಿ ನಿರತಳು. ಈ ದಂಪತಿಯ ಮಗನಾಗಿ ಕುಞ್ಞನ್ ಪಿಳ್ಳೆ ಜನ್ಮವೆತ್ತಿದರು.

ಉದ್ಯೋಗ ನಿಮಿತ್ತ ಭೂತಪಾಂಡಿಯಿಂದ ನೈಯ್ಯಾಟ್ಟಿಂಗರ, ಅಲ್ಲಿಂದ ತಿರುವನಂತಪುರ – ಹೀಗೆ ಅಲೆದಾಡಿದ ಕುಞ್ಞನ್ ಪಿಳ್ಳೆ ವಿವಿಧ ವಿಷಯಗಳಲ್ಲಿ ಆಸಕ್ತಿ ಬೆಳೆಸಿಕೊಂಡವರು. ಕುಸ್ತಿ, ಸಂಗೀತ, ಅಸ್ಪೃಶ್ಯರೊಂದಿಗೆ ಒಡನಾಟ, ಜ್ಞಾನದಾಹ, ಧ್ಯಾನ, ವೇದಾಂತಿಗಳಿಗಾಗಿ ಅಲೆದಾಟ – ಇದು ಅವನ ವ್ಯವಹಾರ ಜಗತ್ತು.

ಕೆ. ಕೃಷ್ಣನಾಶಾನ್ ಅವರು ಸ್ವಾಮಿಗಳ ಕುಸ್ತಿ ಕೌಶಲದ ಕುರಿತು ಹೀಗೆ ಬರೆದಿದ್ದಾರೆ – "ಎಲ್ಲಿಂದಲೋ ಸಂಪಾದಿಸಿಕೊಂಡ ಮರ್ಮಶಾಸ್ತ್ರವನ್ನು ಬಳಸಿ ಸ್ವಾಮೀಜಿ ಅನೇಕ ಕುಸ್ತಿಯ ವರಸೆಗಳನ್ನು ಕಲಿತರು. ತಾನು ಅರಗಿಸಿಕೊಂಡುದೆಲ್ಲವನ್ನೂ ವೆಳುತ್ತೇರಿ ಕೇಶವನ್ ವೈದ್ಯನಿಗೂ ಹೇಳಿಕೊಟ್ಟರು. ಕೆಲವೊಮ್ಮೆ ಆಪ್ತರೊಂದಿಗೆ ತಮಾಷೆಗಾಗಿ ಕುಸ್ತಿ ಮಾಡುತ್ತಿದ್ದರು. ಕೇಶವನ ಶರೀರ ಕಬ್ಬಿಣದ ಪ್ರತಿರೂಪ. ಕೇರಳವರ್ಮ ವಲಿಯಕೋಯಿ ತಂಬುರಾನ್ ಎತ್ತುತ್ತಿದ್ದ ಕಬ್ಬಿಣದ ಗುಂಡುಗಳನ್ನು ಎತ್ತ ಬಲ್ಲವರೆಂದರೆ ಇವರಿಬ್ಬರು ಮಾತ್ರ. ಕೊಲ್ಲಂನ ಓಲೆಯಿಲ್ ಎಂಬಲ್ಲಿ

ಕುಸ್ತಿ ಕಲಿತ ನಾಯಮ್ಮಾರ್‌ಗಳು ಕೆಲವರಿದ್ದರು. ದಾರಿಯಲ್ಲಿ ಗುಂಪಾಗಿ ನಿಲ್ಲುತ್ತಿದ್ದ ಇವರೆಂದರೆ ಎಲ್ಲರಿಗೂ ಭಯ. ಒಮ್ಮೆ ಸ್ವಾಮೀಜಿ ಅವರ ನಡುವೆ ಸಿಕ್ಕಿಬಿದ್ದರು. ತನ್ನ ರಕ್ಷಣೆಗಾಗಿ ಅವರು ಸೀದಾ ಅವರ ಮಧ್ಯಕ್ಕೆ ನುಗ್ಗಿ ಶರೀರವನ್ನು ಆಚೀಚೆ ಅಲುಗಿಸಿದ್ದೆ ಕುಸ್ತಿಪಟುಗಳೆಲ್ಲ ಅಲ್ಲಲ್ಲಿ ಉರುಳಿಬಿದ್ದರು. ಅವರು ಎದ್ದು ನೋಡಿದಾಗ ಅಷ್ಟುಮುಂದೆ ನಿಂತಿದ್ದ ಸ್ವಾಮೀಜಿಯನ್ನು ಕಂಡು ಹತ್ತಿರ ಹೋಗಿ ನಮಸ್ಕರಿಸಿದರು."

## ಸರಕಾರಿ ಉದ್ಯೋಗ

ಅಮ್ಮನ ಒತ್ತಾಯಕ್ಕೆ ಮಣಿದು ಕುಞ್ಞನ್ ಪಿಳ್ಳೆ ತಿರುವನಂತಪುರದ ಕೋರ್ಟೊಂದರಲ್ಲಿ ವ್ಯವಹರಿಸುತ್ತಿದ್ದ ಪಪ್ಪು ಪಿಳ್ಳೆ ಎಂಬ ವಕೀಲರ ಗುಮಾಸ್ತನಾಗಿ ಸೇರಿಕೊಂಡರು. ಪ್ರತಿವಾದಿ ಭಯಂಕರನಾಗಿ ಎದುರಾಳಿಗಳಲ್ಲಿ ಬೆವರಿಳಿಸುತ್ತಿದ್ದ ಆ ಸಮರ್ಥ ವಕೀಲನನ್ನು ಹದ್ದುಬಸ್ತಿನಲ್ಲಿಡುವ ಪ್ರಾವೀಣ್ಯ ಕುಞ್ಞನಿಗಿತ್ತು. ಈ ಉದ್ಯೋಗದಲ್ಲೂ ಅವರು ಹೆಚ್ಚು ಸಮಯ ಮುಂದುವರಿಯಲಿಲ್ಲ.

ಪ್ರಾರಬ್ಧ ಮುಗಿಯಲಿಲ್ಲವೆಂಬಂತೆ ಇನ್ನೊಮ್ಮೆ ಕೂಡಾ ಕುಞ್ಞನ್ ಪಿಳ್ಳೆ ಸರಕಾರಿ ಉದ್ಯೋಗವೊಂದರಲ್ಲಿರಬೇಕಾಯಿತು. ತಿರುವಿದಾಂಕೂರ್ ಸರಕಾರದ ಆಡಳಿತಕ್ಕೊಳಪಟ್ಟ ಹಜೂರ್ ಕಛೇರಿಯಲ್ಲಿ ಅನೇಕ ಗುಮಾಸ್ತರ ಹುದ್ದೆ ಖಾಲಿ ಇತ್ತು. ಅರ್ಜಿದಾರರಿಗೆ ಟಿ. ಮಾಧವರಾವ್ ಒಂದು ಗಣಿತದ ಸಮಸ್ಯೆಯನ್ನು ಬಿಡಿಸುವಂತೆ ಹೇಳಿದ್ದರು. ಎಲ್ಲರೂ ಉತ್ತರದ ಸಮೇತ ಕಛೇರಿಗೆ ಬಂದರು. ರಾಯರಿಗೆ ವಿಸ್ಮಯ ಕಾದಿತ್ತು. ಸಮಸ್ಯೆಯನ್ನು ಬಿಡಿಸುವಲ್ಲಿ ಯಾರೋ ಒಬ್ಬನೇ ಬುದ್ಧಿವಂತ ಎಲ್ಲರಿಗೂ ನೆರವಾದನೆಂಬ ಸಂದೇಹ ಅವರಲ್ಲಿ ಮೂಡಿತು. ಆ ಕೆಲಸ ಕುಞ್ಞನ್ ಪಿಳ್ಳೆಯದ್ದೇ ಎಂದು ಅವರು ಕಂಡುಹುಡುಕಿದರು! ಅವರು ಚಟ್ಟಂಬಿಯನ್ನು ಬರಹೇಳಿದರು. ವಿವಿಧ ಬಗೆಯಿಂದ ಆತನನ್ನು ಪರೀಕ್ಷಿಸಿದರು. ಕೇವಲ ಬೆರಳುಗಳ ಸಹಾಯದಿಂದ ಚಕಚಕನೆ ಗುಣಿಸಿ ಉತ್ತರಿಸುತ್ತಿದ್ದ ಆ ಯುವಕನಿಗೆ ನಾಲ್ಕು ರೂಪಾಯಿ ಸಂಬಳದ ಕೆಲಸವನ್ನು ಕೊಡಮಾಡಿದರು.

ಚಟ್ಟಂಬಿ ಕುಞ್ಞನ್ ಪಿಳ್ಳೆಯ ಕುಶಾಗ್ರಮತಿಯನ್ನೂ ಪ್ರಾಮಾಣಿಕತೆಯನ್ನೂ ನೋಡಿ ಮೆಚ್ಚಿದ ದಿವಾನ್‌ಜಿ ಆ ತಿಂಗಳ ಸಂಬಳವನ್ನು ತಾನೇ ವಿತರಿಸಿದರು. ಆದರೆ ಕೊಟ್ಟದ್ದು ಹತ್ತುರೂಪಾಯಿ. ಕುಞ್ಞನ್ ಪಿಳ್ಳೆ ಅದಕ್ಕೆ ಸುತರಾಂ ಕೈನೀಡಲಿಲ್ಲ. ಕೊನೆಗೆ ಪಡಕೊಂಡ ನಾಲ್ಕೂ ರೂಪಾಯಿಗಳನ್ನು ಅಮ್ಮನಿಗೆ ಹಸ್ತಾಂತರಿಸಿದರು. ಚಟ್ಟಂಬಿ ಕುಞ್ಞನ್ ಪಿಳ್ಳೆಯ ಈ ಅಪರಿಗ್ರಹ ಗುಣವನ್ನು ನೋಡಿದ ದಿವಾನ್‌ಜಿ ಆಶ್ಚರ್ಯಗೊಂಡರು.

ಮೊದಲ ಸಂಬಳ ಪಡೆದ ಕೆಲವೇ ದಿನ ಕಳೆದು ಕುಞ್ಞನ್ ಪಿಳ್ಳೆ ರಜೆಗಾಗಿ ಅರ್ಜಿ ಸಲ್ಲಿಸಿದರು. ಹಿರಿಯ ಅಧಿಕಾರಿ ತ್ರಿವಿಕ್ರಮನ್ ತಂಬಿ ಅದಕ್ಕೆ ಒಪ್ಪಲಿಲ್ಲ. ಈ ಸಂಬಂಧ ಅವರೊಳಗಿನ ಮಾತುಕತೆ ಹೀಗಿತ್ತು:-

ತಂಬಿ : ನಾಳೆ ದಿವಸ ನಾನು ಬರುವಾಗ ನಿನ್ನ ಸ್ಥಳದಲ್ಲಿ ನೀನು ಹಾಜರಿರತಕ್ಕದ್ದು.

ಚಟ್ಟಂಬಿ : ನನ್ನನ್ನು ಅಲ್ಲಿ ಕೂತಾಗ ನೋಡಬೇಕು.

ಹೀಗೆ ಅವರು ಹಲಕೆಲವು ಕೆಲಸಗಳಿಗೆ ಸೇರಿದರು, ಬಿಟ್ಟರು. ಅವರ ಈ ನಡತೆಗೆ ಸ್ವಾತಂತ್ರ್ಯಾಪೇಕ್ಷೆಯೇ ಕಾರಣವಾಗಿಬೇಕು.

## ಮಹೇಶ್ವರಾವತಾರ

ಕವಿ ಚಂದ್ರದತ್ತ ಎಂಬವರ ಪ್ರಸಿದ್ಧ ಕಾವ್ಯವಾದ ಶ್ರೀ ವಿದ್ಯಾಧಿರಾಜ ವಿಲಾಸದಲ್ಲಿ 'ಚಟ್ಟಂಬಿ ಸ್ವಾಮಿ ತಿರುವಡಿ'ಗಳನ್ನು ಈಶ್ವರನ ಅವತಾರವೆಂದೇ ವರ್ಣಿಸಲಾಗಿದೆ.

ಚಟ್ಟಂಬಿ ಸ್ವಾಮಿಗಳ ಬಹುದಿನಗಳ ಮಿತ್ರ ಪಿರಪ್ಪನ್‌ಕೋಡ್ ಈಶ್ವರ ಪಿಳ್ಳೆಯವರು ವಾಸುದೇವ ಶರ್ಮ ಕಂಡ ಕನಸೊಂದನ್ನು ವರ್ಣಿಸಿದ್ದಾರೆ. ಆ ಪದ್ಯಭಾಗದಲ್ಲಿ ಚಟ್ಟಂಬಿ ಸ್ವಾಮಿಗಳನ್ನು ಶಂಕರಾಚಾರ್ಯರಿಗೆ ಹೋಲಿಸಲಾಗಿದೆ.

ಅವತಾರ ಪುರುಷರಿಗೆ ಅವರದೇ ಕಾರ್ಯವ್ಯಾಪ್ತಿಯಿರುತ್ತದೆ. ಅಂತಹ ಸಾಧನೆಗೆ ತಕ್ಕ ವಾತಾವರಣ ಅವರ ಸುತ್ತಲೂ ನಿರ್ಮಾಣವಾಗುತ್ತದೆ. ಶ್ರೀರಾಮನನ್ನು ಅಂತಹ ಸನ್ನಿವೇಶಗಳಿಗೆ ತಳ್ಳುವ ಪ್ರಕ್ರಿಯೆ ಜ್ಞಾನ ವಾಸಿಷ್ಠದಲ್ಲಿ ಗೋಚರವಾಗುತ್ತದೆ. ಹಾಗೇ ಗೋಕುಲಕ್ಕೆ ಅಕ್ರೂರನ ಆಗಮನವಾದದ್ದು ಕೃಷ್ಣನ ಬದುಕಿಗೆ ಒಂದು ತಿರುವನ್ನು ಕೊಟ್ಟಿತು. ಕುಞ್ಞನ್ ಪಿಳ್ಳೆ ಅವರಿಗೂ ಇಂತಹ ಸನ್ನಿವೇಶ ಇದಿರಾಯಿತು.

## ಹೊರದಾರಿ

ಚಟ್ಟಂಬಿ ಸ್ವಾಮಿಗಳ ಈ ತನಕದ ಜೀವನ ವೃತ್ತಾಂತವನ್ನು ಲೌಕಿಕ ಮತ್ತು ಅಲೌಕಿಕ ಹಿನ್ನೆಲೆಗಳಲ್ಲಿ ಬೇಕಾದಂತೆ ವಿಶ್ಲೇಷಿಸಬಹುದು. ತಿರುವನಂತಪುರಕ್ಕೆ ಮರಳಿದ ಮೇಲೆ ಮತ್ತೆ ರಾಮನ್ ಪಿಳ್ಳೆ ಆಶಾನ್ ಅವರೇ ಚಟ್ಟಂಬಿ ಸ್ವಾಮಿಗಳಿಗೆ ಆಶ್ರಯ ನೀಡಿದರು. ಆಗ ಶಾಲೆಯಲ್ಲಿಯೂ ಬಹಳಷ್ಟು ಬದಲಾವಣೆಗಳಾಗಿದ್ದುವು. ಕುಞ್ಞನ ಪ್ರಾಯವೀಗ ಇಪ್ಪತ್ತೆರಡು ವರ್ಷ. ಆಶಾನ್ ತನ್ನ ವಸತಿಯನ್ನೇ ಕೇಂದ್ರವಾಗಿಟ್ಟುಕೊಂಡು ಜ್ಞಾನಪ್ರಜಾಗರ ಎಂಬ ಸಂಘವನ್ನು ಹುಟ್ಟುಹಾಕಿದ್ದರು. ಈ ಸಂಸ್ಥೆಗೆ ಉನ್ನತ ಜ್ಞಾನಾಕಾಂಕ್ಷಿಗಳು, ವಿದ್ವಾಂಸರ, ಸಾಹಿತ್ಯಾಸಕ್ತರ ಸಹವಾಸವನ್ನು ಬಯಸಿ ಬರುತ್ತಿದ್ದರು. ಇವರಲ್ಲಿ ಸುಂದರ ಪಿಳ್ಳೆ, ಸ್ವಾಮಿನಾಥ ದೇಶಿಕರು ಹಾಗೂ ತೈಕಾಟ್ಟಯ್ಯಾ ಸ್ವಾಮಿ ಪ್ರಮುಖರು. ಈ ಮೂವರೂ ಕೂಡ ಚಟ್ಟಂಬಿ ಸ್ವಾಮಿಗಳ ಜ್ಞಾನಾಕಾಂಕ್ಷೆಗೆ ನೀರೆರೆದರೆನ್ನಬೇಕು.

ಸುಂದರಂ ಪಿಳ್ಳೆ ತಿರುವನಂತಪುರದ ಮಹಾರಾಜಾಸ್ ಕಾಲೇಜಿನಲ್ಲಿ (ಈಗಿನ ಯೂನಿವರ್ಸಿಟಿ ಕಾಲೇಜು) ತತ್ವಶಾಸ್ತ್ರದ ವಿದ್ಯಾರ್ಥಿಯೂ ಆಗಿದ್ದರು. ಮುಂದೆ ಅದೇ ವಿದ್ಯಾಸಂಸೆಥೆಯಲ್ಲಿ ತತ್ವಶಾಸ್ತ್ರ ಪ್ರಾಚಾರ್ಯರಾಗಿ ನೇಮಕಗೊಂಡರು. ಅವರು ವಿದ್ಯಾರ್ಥಿಯಾಗಿದ್ದಾಗ ಜ್ಞಾನಪ್ರಜಾಗರಕ್ಕೆ ಭೇಟಿ ನೀಡುತ್ತಿದ್ದರು. ಕ್ರಮೇಣ ಕುಞ್ಞನ್

ಪಿಳ್ಳೆಯೊಂದಿಗೆ ಅವರ ಗೆಳೆತನ ವೃದ್ಧಿಸಿತು. ತನ್ನ ಜ್ಞಾನ, ಅನುಭವ ಸಂಪತ್ತನ್ನು ದಾಟಿಸುವುದಕ್ಕೆ ಅರ್ಹ ಶಿಷ್ಯನಾಗಿ ಅವನನ್ನು ಸ್ವೀಕರಿಸಿ ತೃಪ್ತಿಹೊಂದಿದರು. ಇದರಿಂದ ಚಟ್ಟಂಬಿ ಸ್ವಾಮಿಯವರು ಪಾಶ್ಚಾತ್ಯ ತತ್ವಶಾಸ್ತ್ರದ ಬಗ್ಗೆ ಹೆಚ್ಚು ಕಲಿಯುವುದಕ್ಕೆ ಸಾಧ್ಯವಾಯಿತು. ಚಟ್ಟಂಬಿ ಅವರು ಭಾರತೀಯ ಮತ್ತು ಪಾಶ್ಚಾತ್ಯ ತತ್ವಶಾಸ್ತ್ರಗಳನ್ನು ಹೋಲಿಸಿ ನೋಡಿ ನಮ್ಮದೇ ಶ್ರೇಷ್ಠವೆನ್ನುವುದನ್ನು ಸುಲಭವಾಗಿ ಕಂಡುಕೊಂಡರು.

ಜ್ಞಾನಪೂಜಾಗರದಲ್ಲಿ ವೇದಾಂತ, ಚರಿತ್ರೆ, ತಮಿಳು ವ್ಯಾಕರಣವೇ ಮೊದಲಾದ ವಿಷಯಗಳಲ್ಲಿ ಅದ್ವಿತೀಯರೆನ್ನಿಸಿದವರೆಲ್ಲ ಜೊತೆಗೂಡಿದ್ದರು. ಅವರೆಲ್ಲರ ಒಡನಾಟದಿಂದ ಚಟ್ಟಂಬಿ ಅಪಾರ ಜ್ಞಾನ ಗಳಿಸಿದರು. ಇವರ ನಡುವೆ ತೈಕಾಟಯ್ಯಾವರು ತಮಿಳು ಸಿದ್ಧ ಪುರುಷರ ಕಥೆ – ಸಾಧನೆಗಳನ್ನು ವ್ಯಾಖ್ಯಾನಿಸಿ ಕೇಳುಗರ ಮನಸೂರೆಗೊಂಡಿದ್ದರು. ಅವರಿಗೆ ಹಠಯೋಗವೂ ಕರತಲಾಮಲಕವಾಗಿತ್ತು. ಕುಞ್ಞನ್ ಪಿಳ್ಳೆಯ ವಿನಯ ಮತ್ತು ಜಿಜ್ಞಾಸಾ ಪ್ರವೃತ್ತಿಯನ್ನು ತಿರುವನಂತಪುರದ ರೆಸಿಡೆನ್ಸಿ ಮ್ಯಾನೇಜರಾಗಿದ್ದ ತೈಕಾಟ್ಟಯ್ಯಾ ಹತ್ತಿರದಿಂದ ಕಂಡವರು. ಹಾಗಾಗಿ ಅವನನ್ನು ತನ್ನ ಮನೆಗೆ ಆಮಂತ್ರಿಸಿದರು. ತಮಿಳು ವೇದಾಂತ, ಹಠಯೋಗದಂತಹ ಗಹನತೆ ಕುಞ್ಞನ್ ಪಿಳ್ಳೆಗೆ ಹೀಗೆ ವಶವರ್ತಿಯಾಯಿತು.

ಆಗ ಕುಞ್ಞನಿಗೆ ಇಪ್ಪತ್ತನಾಲ್ಕರ ಹರೆಯ. ತಿರುವನಂತಪುರದಲ್ಲಿ ನವರಾತ್ರಿ ವಿದ್ವತ್ ಸಭೆ ನಡೆಯುತ್ತಿತ್ತು. ಶ್ರೀ ಸುಬ್ಬಾ ಜಟಾಪಾಠಿ ಅದರ ಅಧ್ಯಕ್ಷರಾಗಿದ್ದರು. ಅವರು ಪಾಂಡಿದೇಶದ ಹೆಸರಾಂತ ವೇದಪಾರಂಗತ ಜ್ಞಾನನಿಧಿಯೆನಿಸಿ ದಕ್ಷಿಣಭಾರತದ ಸಮಸ್ತ ವಿದ್ವನ್ಮಂಡಳಿಯ ಗೌರವಾದರಗಳಿಗೆ ಪಾತ್ರರಾದವರು.

ನವರಾತ್ರಿಯ ಸಭೆಗಳಲ್ಲಿ ಮುಖ್ಯವಾಗಿ ವಿದ್ವಜ್ಜನ ಸಂವಾದ ಹಾಗೂ ಸಂಗೀತ ಸಭೆಗಳೆಂಬ ಎರಡು ಆಕರ್ಷಣೆಗಳಿದ್ದವು. ಸಭಾಧ್ಯಕ್ಷರಾಗಿ ಜಟಾವಲ್ಲಭರು ಮಹಾರಾಜನ ಅತಿಥಿಯಾಗಿ ಉಳಕೊಂಡಿದ್ದರು. ಹಾಗಾಗಿ ಅವರನ್ನು ಕಾಣುವ ಕುತೂಹಲಿಗಳ ಸಂಖ್ಯೆ ಹೆಚ್ಚಿತ್ತು. ಸ್ವಾಮಿನಾಥ ದೇಶಿಕರು ಕುಞ್ಞನ್ ಪಿಳ್ಳೆಯನ್ನು ಕರೆದುಕೊಂಡು ಜಟಾವಲ್ಲಭರನ್ನು ಭೇಟಿಯಾದರು. ಮುಂದಿನ ಚಾರಿತ್ರಿಕ ವ್ಯಕ್ತಿಯ ಪರಿಚಯ ಮಾಡಿಸಿದರು. ಅವರೊಳಗೆ ನಡೆದ ಸಂಭಾಷಣೆಯನ್ನು ಗಮನಿಸಿದವರಿಗೆ ಈ ಕೆಳಗಿನ ವಿಚಾರಗಳು ವ್ಯಕ್ತಗೊಂಡುವು.

ಕುಞ್ಞನ್ ಪಿಳ್ಳೆಗೆ ವೇದ, ವೇದಾಂತ ಹಾಗೂ ಮತತ್ರಯಗಳ ವಿಷಯದಲ್ಲಿ ಅನೇಕ ಗೂಢ ವಿಚಾರಗಳ ಅರಿವಿತ್ತು.

ವೇದಗಳನ್ನು ಕಲಿಯಬೇಕೆಂಬ ಅಭಿಲಾಷೆ ಅವರಲ್ಲಿತ್ತು. ಆದರೆ ಪಾಠ ಹೇಳುವ ವಿಶಾಲ ಮನಸ್ಸು ಯಾವ ಬ್ರಾಹ್ಮಣನಿಗೂ ಇರಲಿಲ್ಲ. ಮೇಲಾಗಿ ಕುಞ್ಞನ್ ಪಿಳ್ಳೆ ತಮಿಳು ಸಾಹಿತ್ಯ, ತತ್ವಶಾಸ್ತ್ರ, ವ್ಯಾಕರಣ ಮುಂತಾದ ವಿವಿಧ ವಿಷಯಗಳಲ್ಲಿ ಅದ್ಭುತ ಪಾಂಡಿತ್ಯ ಹೊಂದಿದ್ದರು.

ಜಟಾವಲ್ಲಭರು ತನಗೆ ದೈವೇಚ್ಛೆಯಿಂದಲೇ ಇಂತಹ ಶಿಷ್ಯ ಸಿಕ್ಕಿದನೆಂದು ಬಗೆದರು. ಇದೇ ಸಂದರ್ಭದಲ್ಲಿ ತಮ್ಮ ಕಾರ್ಯಕ್ರಮವನ್ನು ಮುಗಿಸಿಕೊಂಡು ಹೊರಟ ಅನೇಕ ಬ್ರಾಹ್ಮಣ ಪಂಡಿತರು ಜಟಾವಲ್ಲಭರನ್ನು ಭೇಟಿಯಾಗುವುದಕ್ಕೆ ಬಂದರು. ಆಮೇಲೆ ಅವರೂ ಹೊರಡಲಿದ್ದರು. ಕಳುಹಿಸಿಕೊಡುವುದಕ್ಕಾಗಿ ಹೊರಗೆ ವಿದ್ವಾಂಸರ ಪ್ರವಾಹವೇ ಸೇರಿತ್ತು. ಒಂದೆಡೆ ಚಟ್ಟಂಬಿಯೂ ಇದ್ದರು. ಹೊರಗಿಳಿದ ಜಟಾವಲ್ಲಭರು ಬ್ರಾಹ್ಮಣರೊಂದಿಗೆ ಸಂಸ್ಕೃತದಲ್ಲೇ ಮಾತನಾಡಿ ಬೀಳ್ಕೊಟ್ಟರು. ಆಮೇಲೆ ವಿನಯಭರಿತನಾಗಿ ನಿಂತಿದ್ದ ಕುಞ್ಞನ್ ಪಿಳ್ಳೆಯನ್ನು ಹತ್ತಿರ ಕರೆದರು.

"ಕುಞ್ಞಾ, ಕಲ್ಲಡ ಕುರಿಚ್ಚಿಕ್ಕು ವರಯಾ" ಎಂದು ಪ್ರಶ್ನಿಸಿದರು. ಕುಞ್ಞನಿಗೆ ಸಂತೋಷವನ್ನು ತಡೆದುಕೊಳ್ಳುವುದಕ್ಕೇ ಸಾಧ್ಯವಾಗಲಿಲ್ಲ. ವಿನಯಪೂರ್ವಕ ನಗುವಿನ ಹಿಂದೆ ಪೂರ್ಣ ಒಪ್ಪಿಗೆ ಅಡಗಿತ್ತು.

ಹಾಗೆ ಸುಬ್ಬಾ ಜಟಾಪಾಠಿ★ಯ ಊರಿಗೆ ಹೊರಟ ಕುಞ್ಞನ್ ಪಿಳ್ಳೆಯ ಭಾಗ್ಯ ಕೇರಳ ರಾಜ್ಯಕ್ಕೂ ಸುವರ್ಣಾಕ್ಷರದಿಂದ ಬರೆಯಬೇಕಾದ ಮುಹೂರ್ತವೆನಿಸಿತು. ಗುರುವಿನ ಔದಾರ್ಯದಿಂದ ಜ್ಞಾನದಾಹಿಯೊಬ್ಬನ ಅಭಿಲಾಷೆ ಈಡೇರಿತು. ವೇದಾಧಿಕಾರ ದೇವತೆಗೆ ಬಿಗಿದಿದ್ದ ಕಬ್ಬಿಣದ ಸಂಕೋಲೆ ಕಳಚಿ ಬಿತ್ತು.

ಸರ್ವಜ್ಞ : ಕಲ್ಲಡಕುರುಚ್ಚಿಯ ಸುಬ್ಬಾಜಟಾಪಾಠಿಯ ಮನೆಯನ್ನು ಸರಸ್ವತೀ ಮಂದಿರವೆಂದೇ ಕರೆಯುತ್ತಿದ್ದರು.

ಅಲ್ಲಿಗೆ ದೇಶದ ಮೂಲೆ ಮೂಲೆಗಳಿಂದ ವಿದ್ವಾಂಸರು ಬರುತ್ತಿದ್ದರು. ಜ್ಞಾನ ಜಗತ್ತಿನ ನಿಧಿಶೋಧನೆ, ಸಂದೇಹ ನಿವಾರಣೆ, ಸಜ್ಜನ ಸಮ್ಮಿಲನಗಳಿಗೆ ಅದು ಸೂಕ್ತ ಪ್ರದೇಶವಾಗಿತ್ತು.

*★ಬರವಣಿಗೆ ಇಲ್ಲದೇ ಇದ್ದ ಕಾಲದಿಂದಲೇ ವೇದ ಮಂತ್ರಗಳ ರಕ್ಷಣೆ ಮತ್ತು ತಲೆಮಾರಿನಿಂದ ತಲೆಮಾರಿಗೆ ದಾಟಿಸುವ ಕೈಂಕರ್ಯಕ್ಕೆ ಸ್ವಾಧ್ಯಾಯವೇ ತಕ್ಕ ಅವಲಂಬನೆಯಾಗಿತ್ತು. ಪದಪಾಠ, ಕ್ರಮಪಾಠ, ಜಟಾಪಾಠ, ಘನಪಾಠ ಎಂಬ ನಾಲ್ಕು ಬಗೆಯ ಪಾಠಗಳು ಇದಕ್ಕೆ ಅಗತ್ಯ. ಸಂಧಿ ನಿಯಮಾನುಸಾರ ಸಂಹಿತಾ ವಾಕ್ಯಗಳನ್ನು ಪದಪದ ಭೇದಿಸಿ ಗುರುತಿಸುವುದು ಪದಪಾಠ. ಅಂತಹ ಪದಗಳನ್ನು ಪೂರ್ವೋತ್ತರ ಪದಗಳೊಂದಿಗೆ ಸೇರಿಸಿ ಎರಡೆರಡು ಬಾರಿ ಉಚ್ಚರಿಸುವುದಕ್ಕೆ ಕ್ರಮಪಾಠವೆಂದು ಹೆಸರು. ಉದಾಹರಣೆಗೆ – ಅಗ್ನಿಮ್ ಈಳೇ ಈಳೇ ಪುರೋಹಿತಂ ಪುರೋಹಿತಂ ಯಜ್ಞಸ್ಯ ಯಜ್ಞಸ್ಯ ದೇವಂ ದೇವಂ ಋತ್ವಿಜಂ.......ಹೀಗೆ. ಮೂರನೆಯದಾದ ಜಟಾಪಾಠ ಕ್ರಮದಲ್ಲಿ ಮೂರುಬಾರಿ ಉಚ್ಚರಿಸಬೇಕಾಗುತ್ತದೆ. ಎರಡನೇ ಆವೃತ್ತಿಯಲ್ಲಿ ಪುನರಾವರ್ತನೆ ಮಾಡಬೇಕು. ಉದಾಹರಣೆಗೆ – ಅಗ್ನಿಂ ಈಳೇ, ಈಳೇ ಅಗ್ನಿಂ ಅಗ್ನಿಂ ಈಳೇ ಇತ್ಯಾದಿ. ನಾಲ್ಕನೆಯದು ಘನಪಾಠ. ವಿದ್ಯೆಯನ್ನು ಹೀಗೆ ಮೌಖಿಕವಾಗಿ ದಾಟಿಸುತ್ತಿದ್ದ ಕ್ರಮದಿಂದಾಗಿ ಅನೇಕ ಗ್ರಂಥಗಳು ಅನ್ಯರ ಪಾಲಾದರೂ ವಿದ್ವಾಂಸರಲ್ಲಿ ಅದು ಬಾಕಿಯಾಗಿ ದೇಶದಲ್ಲಿ ಮುಂದುವರಿಯುವುದಕ್ಕೆ ಸಾಧ್ಯವಾಯಿತು.*

ಅಲ್ಲಿ ಚಟ್ಟಂಬಿ ಕುಞ್ಞನ್ ಪಿಳ್ಳೆಗೆ ಎರಡು ಅವಕಾಶಗಳು ಸಿಕ್ಕಿದುವು. ಜಟಾವಲ್ಲಭರಿಂದ ಸಾಧ್ಯವಾದಷ್ಟು ಜ್ಞಾನ ಸಂಪಾದನೆ ಒಂದು ಬಗೆಯದ್ದಾದರೆ ಭಾರತದ ಮೂಲೆ ಮೂಲೆಗಳಿಂದ ಬರುತ್ತಿದ್ದ ಪಂಡಿತರ ಭಾಷಣಗಳನ್ನು ಕೇಳುತ್ತ ಸಂವಾದಗಳಲ್ಲಿ ಭಾಗವಹಿಸುವುದು ಇನ್ನೊಂದು ರೀತಿಯದ್ದು. ಗ್ರಹಣ ಶಕ್ತಿ, ನೆನಪು ಶಕ್ತಿ ಮತ್ತು ಸಹಜಾಸಕ್ತಿಗಳು ಇದ್ದ ಕಾರಣದಿಂದಾಗಿ ಕುಞ್ಞನ್ ಪಿಳ್ಳೆ ಅಲ್ಲಿ ಗರಿಷ್ಠ ಲಾಭವನ್ನು ಪಡೆದರು. ವಿಶಾಲ ವಿಜ್ಞಾನ ಸಮುದ್ರವನ್ನು ಅಗಸ್ತ್ಯನಂತೆ ಕುಡಿದರು.

ನಾಲ್ಕು ವರ್ಷಗಳಲ್ಲಿ ಕುಞ್ಞನ್ ಪಿಳ್ಳೆ ಅಷ್ಟೆತ್ತರ ಬೆಳೆದರು. ಶಾಸ್ತ್ರಜ್ಞಾನ, ಲೋಕಜ್ಞಾನಗಳ ನಿಮಿತ್ತ ಅವರು ಸರ್ವಜ್ಞನೆನಿಸಿದರು. ಪ್ರಾಚೀನ ಮಲೆಯಾಳಂ, ವೇದಾಧಿಕಾರ ನಿರೂಪಣಂ, ಅದ್ವೈತಚಿಂತಾ ಪದ್ಧತಿಯಂತಹ ಕೃತಿಗಳನ್ನು ಸಾರಸ್ವತ ಲೋಕಕ್ಕೆ ನೀಡಿದರು.

ಜಟಾವಲ್ಲಭರು ಅವರನ್ನು ಮಗನಂತೆ ಪ್ರೀತಿಸುತ್ತಿದ್ದರು. ಅಧ್ಯಯನವಿಲ್ಲದ ಬಿಡುವಿನ ವೇಳೆಗಳಲ್ಲಿ ಕುಞ್ಞನ್ ಪಿಳ್ಳೆ ಯೋಗ ವಿದ್ಯೆ, ವಾದ್ಯ ವಾದನಗಳನ್ನು ಅಭ್ಯಸಿಸಿ ಪ್ರವೀಣರೆನ್ನಿಸಿದರು. ಶಿಷ್ಯನಿಂದ ಅಗಲಲಾರದ ಗುರು ಕೊನೆಗೂ ಹರಸಿ ಕಳುಹಿಸಿದರು. ಆದರೆ ತಾನಾಗಿ ಸಿಕ್ಕಿದ ಚಿಂತಾರತ್ನದಂತಹ ಶಿಷ್ಯನನ್ನು ಆ ದಂಪತಿ ಮನಸ್ಸಿಲ್ಲದ ಮನಸ್ಸಿನಿಂದ ಕಳುಹಿಸಿಕೊಡಬೇಕಾಯಿತು.

ದಾರಿಯಲ್ಲಿ ತಮಿಳುನಾಡಿನ ಅನೇಕ ಸಾಂಸ್ಕೃತಿಕ ಕೇಂದ್ರಗಳಿಗೆ ಅವರು ಭೇಟಿಯಿತ್ತರು. ಅಲ್ಲಲ್ಲಿ ಪ್ರಯಾಣ ಮುಂದುವರಿಸಬೇಕಾಗಿತ್ತು. ಹೆಸರಾಂತ ಪಂಡಿತರು ಹಾಗೂ ಗ್ರಂಥಗಳ ಪರಿಚಯ ಅವರಿಗಾಯಿತು. ಒಬ್ಬ ಮುಸಲ್ಮಾನ ಬಂಧುವಿನಿಂದ ಖುರಾನ್ ಕೂಡಾ ಕಲಿತರು. ಮರುತ್ವಾಮಲೆಯಲ್ಲಿ ತಪೋನಿರತರಾಗಿದ್ದ ಕುಮಾರವೇಲು ಎಂಬ ಆತ್ಮಾನಂದ ಸ್ವಾಮೀಜಿಯವರಿಂದ ಅಗಸ್ತ್ಯ ಸಂಪ್ರದಾಯದ ಯೋಗವಿಧಿಗಳನ್ನೂ ಅಭ್ಯಸಿಸಿದರು.

ಈ ಪ್ರಯಾಣದುದ್ದಕ್ಕೆ ಅವರಿಗೆ ಗಿರಿವನಗಳಲ್ಲಿದ್ದ ವಿಶೇಷ ಔಷಧ ಗಿಡಗಳ ಬಗ್ಗೆ ತಿಳಿದುಕೊಳ್ಳುವುದಕ್ಕೂ ಸಾಧ್ಯವಾಯಿತು. ಕುಞ್ಞನ್ ಪಿಳ್ಳೆ ಆ ಕಾಲದ ಜ್ಞಾನದಾಹಿಗಳಲ್ಲೇ ಮೊದಲನೆಯವರೆನಿಸಿದರೂ ಇನ್ನೂ ಕಲಿಯಬೇಕೆಂಬ ಅವರ ಆಸೆ ಮಾತ್ರ ತಣಿಯಲಿಲ್ಲ.

**ಒಂದು ವಿಚಿತ್ರ ಘಟನೆ :** ತಿರುವನಂತಪುರಕ್ಕೆ ಹಿಂತಿರುಗುತ್ತಿದ್ದ ಚಟ್ಟಂಬಿ ಅವರ ಪ್ರಯಾಣ ಒಂದು ತೀರ್ಥಯಾತ್ರೆಯಂತಿತ್ತು. ಅವರು ದಾರಿಯುದ್ದಕ್ಕೂ ಅನೇಕ ಪುಣ್ಯಸ್ಥಳಗಳಿಗೆ ಭೇಟಿನೀಡಿದರು. ಅಂದು ಮಧ್ಯ ಮಲಯಾಳದಲ್ಲಿ ನಡೆದ ಒಂದು ಘಟನೆ ಉಲ್ಲೇಖನೀಯ.

ಆ ಸಂಜೆ ರಾಜಪ್ರಭುಕುಟುಂಬದ ಮನೆಯೊಂದರಲ್ಲಿ ಭಿಕ್ಷೆ ಸ್ವೀಕರಿಸಿದರು. ಕತ್ತಲಾಗತೊಡಗಿದ್ದುದರಿಂದ ಉಳಿಯುವುದಕ್ಕೆ ಒಂದು ತಾವು ಸಿಕ್ಕಿದರಾದೀತೆಂಬ ಆಸೆಯನ್ನು ಮನೆ ಯಜಮಾನನ ಮುಂದೆ ವ್ಯಕ್ತಪಡಿಸಿದರು.

ಮನೆಯ ಮುಂದಿನ ಮುಖಮಂಟಪ ತೆರವಾಗಿತ್ತು. ಅಲ್ಲಿ ಮಲಗಿಕೊಳ್ಳುವುದಕ್ಕೆ ಮನೆಯಜಮಾನ ಒಪ್ಪಿಗೆ ಸಿಗಬಹುದೆಂದು ಚಟ್ಟಂಬಿ ನಿರೀಕ್ಷಿಸಿದ್ದರು. ಅದರಲ್ಲಿ ಬ್ರಹ್ಮರಾಕ್ಷಸನ ಪೀಡೆ ಇರುವುದರಿಂದ ಯಾರೂ ರಾತ್ರಿ ಹೋಗದಿರುವ ಮತ್ತು ಹೋದರೆ ಜೀವಹಾನಿ ಖಂಡಿತ ಎಂಬ ವಿಚಾರವನ್ನು ಯಜಮಾನ ನಿವೇದಿಸಿಕೊಂಡರು. ಅದಕ್ಕೆ ಚಟ್ಟಂಬಿ ತಾನು ನಿರ್ಭೀತನೆಂದೂ, ಒಪ್ಪಿಗೆ ನೀಡಿದರೆ ಒಬ್ಬೊಂಟಿಯಾಗಿ ಅಲ್ಲಿ ವಿಶ್ರಮಿಸುವುದಾಗಿಯೂ ಹೇಳಿಕೊಂಡರು. ಒತ್ತಾಯಕ್ಕೆ ಕಟ್ಟುಬಿದ್ದ ಗೃಹಸ್ಥ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಗೆ ನೀಡಿದ್ದೂ ಆಯಿತು. ಬೆಳಗಾದ ಮೇಲೆ ಯಜಮಾನ ಅಲ್ಲಿಗೆ ಹೋಗಿ ನೋಡಿದಾಗ ಸಂತೋಷಭರಿತನಾಗಿ ಸಂಗೀತವನ್ನು ಆಲಾಪಿಸುತ್ತಿದ್ದ ಸಾಹಸಿ ಯುವಕನನ್ನು ಕಂಡರು. ಚಟ್ಟಂಬಿ ಅಲ್ಲಿಂದ ಹೊರಡುತ್ತ, "ಇನ್ನು ನಿಮ್ಮ ಈ ಕಟ್ಟಡದಲ್ಲಿ ಬ್ರಹ್ಮರಾಕ್ಷಸ ಇರುವುದಿಲ್ಲ; ಅದಕ್ಕೆ ತಕ್ಕ ಶಾಸ್ತಿ ಮಾಡಿದ್ದೇನೆ" ಎಂದು ಹೇಳಿ ಪ್ರಯಾಣವನ್ನು ಮುಂದುವರಿಸಿದರು.

ಕಲ್ಲುಮನೆ : ಕುಞ್ಞನ್ ಪಿಳ್ಳೆ ಪೇಟೆಗೆ ಬಂದ ವಿಚಾರ ತಿಳಿದು ಕಲ್ಲುಮನೆಯ ಓವರ್‌ಸೀಯರ್ ಕೇಶವನ್ ಪಿಳ್ಳೆ ಧಾವಿಸಿ ಬಂದು, ತನ್ನ ಮನೆಗೆ ಬರುವಂತೆ ಆಮಂತ್ರಿಸಿದರು. ಅವರು ದೂರದ ಬಂಧುಗಳೂ ಹೌದು. ಆದರೂ ಇಂತಹ ಆಮಂತ್ರಣಕ್ಕೆ ಬೇರೆಯೇ ಕಾರಣವಿತ್ತು. ಕೇಶವನ ಪತ್ನಿ ಮಾರಕ ರೋಗದಿಂದ ಬಳಲುತ್ತಿದ್ದರು. ತನ್ನ ಬಂಧು ಒಬ್ಬ ಸಿದ್ಧನಾದುದರಿಂದ ಏನಾದರೂ ಪರಿಹಾರ ದೊರಕಬಹುದೆಂಬುದು ಅವರ ಲೆಕ್ಕಾಚಾರ. ಅದು ನಿಜವಾಯಿತು ಕೂಡ. ಕ್ರಮೇಣ ಅಕ್ಕಮ್ಮನ ರೋಗವೂ ವಾಸಿಯಾಗಿಬಿಟ್ಟಿತು! ಇದಕ್ಕೆ ಅವರು ಒಂದು ಸರಳವಾದ ಔಷಧೋಪಚಾರ ನೀಡಿದ್ದರಷ್ಟೆ. ಅಂದಿನಿಂದ ಚಟ್ಟಂಬಿ ಅವರ ಪಾಲಿಗೆ ಕಲ್ಲುಮನೆ ಗೃಹ ಬೇಕಷ್ಟು ಕಾಲ ಉಳಕೊಳ್ಳುವುದಕ್ಕೂ, ಊಟತಿಂಡಿಗಳಿಗೂ ಆಧಾರವೆನಿಸಿತು. ಕೇಶವ ಪಿಳ್ಳೆಯ ಉಪಚಾರದಿಂದ ಚಟ್ಟಂಬಿ ಸ್ವಾಮೀಜಿಗೆ ಲಾಭವಾದಂತೆ ಅವರ ಅನುಗ್ರಹದಿಂದಾಗಿ ಕೇಶವ ಪಿಳ್ಳೆಗೂ ಭಾರಿ ಸಹಾಯವಾಗಿತ್ತು. ಮುಂಬಯಿ, ಕಲ್ಕತ್ತಾ ಮುಂತಾದೆಡೆ ಮುದ್ರಣಗೊಂಡ ಅನೇಕ ಸಂಸ್ಕೃತ ಗ್ರಂಥಗಳನ್ನು ತರಿಸಿಕೊಟ್ಟು ಕೇಶವನ್ ಋಣವನ್ನು ತೀರಿಸಿಕೊಂಡರು.

## ಅದ್ಭುತ ಪ್ರತಿಭೆ

ಚಟ್ಟಂಬಿ ಸ್ವಾಮಿ ಪ್ರತಿಯೊಂದು ವಿಷಯದಲ್ಲಿ ಜ್ಞಾನ ಗಳಿಸಿದ ಬಗೆಗೆ ಪ್ರಶ್ನಿಸಿದಾಗ ಅವರೇ ಹೇಳಿದ ಸಮಾಧಾನ ಹೀಗಿದೆ – "ನಾನು ಹೊಸತಾಗಿ ಯಾವುದನ್ನೂ ಕಲಿಯುವುದಿಲ್ಲ. ಮರೆವನ್ನು ತೊಡೆದು ಹಾಕುತ್ತ ಬಂದಿದ್ದೇನೆ ಅಷ್ಟೆ" ಸರ್ವಜ್ಞನಾದ ಶಿವನಿಗೆ ತಿಳಿಯದ ವಿಷಯವಿದೆಯೆ? ಆಯಾ ಮನುಷ್ಯ ಸಹಜವಾದ ಪರಿಮಿತಿಗಳನ್ನು ನೀಗಿಕೊಂಡರೆ ಜ್ಞಾನ ತಾನಾಗಿ ತುಂಬುತ್ತದೆ.

ಕೇರಳದ ಜ್ಞಾನಿಗಳು, ವಿದ್ವಾಂಸರು, ಸಂಘಸಂಸ್ಥೆಗಳೆಲ್ಲ ಅವರನ್ನು ಗೌರವಿಸಿದ್ದರು. ಪ್ರತ್ಯಗ್ರ ಶಂಕರ, ಪರಮಭಟ್ಟಾರಕ, ವಿದ್ಯಾಧಿರಾಜ, ಸರ್ವದರ್ಶನ ಸ್ವತಂತ್ರ, ಕೇರಳ ವಿಜ್ಞಾನಾಂಬೋನಿಧಿ, ಸಕಲಕಲಾವಲ್ಲಭ, ಯತಿರಾಟ್, ನಿಗಮಮೂರ್ತಿ, ಸರ್ವಜ್ಞನೇ ಮೊದಲಾದ ಬಿರುದುಬಾವಲಿಗಳು ಅವರ ವ್ಯಕ್ತಿತ್ವವನ್ನು ಅಲಂಕರಿಸಿದ್ದವು. ಶಂಕರಾಚಾರ್ಯರ ನಂತರ ಈ ತನಕ ಈ ಬಗೆಯ ಅಭಿವಂದ್ಯರು ಕೇರಳದಲ್ಲಿ ಇನ್ನೊಬ್ಬರಿಲ್ಲ ಎನ್ನುವುದು ಸರ್ವವಿದಿತ.

ಒಮ್ಮೆ ಕೇಳಿದಷ್ಟಕ್ಕೇ ಗ್ರಹಿಸುವ ಶಕ್ತಿ ಮಾತ್ರವಲ್ಲ ನೋಡಿದ್ದರಲ್ಲಿ ತನ್ಮಯನಾಗಿ ಕಲಿಯುವ ಶಕ್ತಿ ಚಟ್ಟಂಬಿಯವರಿಗೆ ಲಭಿಸಿತ್ತು. ಒಮ್ಮೆ ಅವರು ನಳಚರಿತಂ ಎಂಬ ಆಟಕಥೆ ನೋಡುತ್ತಿದ್ದರು. ಬೇಟೆಗಾರ ದಮಯಂತಿಯನ್ನು ತೋಳುಗಳಿಂದ ಎತ್ತುವ ದೃಶ್ಯವನ್ನು ನಟ ಸುಂದರವಾಗಿ ಅಭಿನಯಿಸಿದ್ದ. ನೆಲದಿಂದ ಕಾಲುಕಿತ್ತು ಆಕಾಶದಲ್ಲಿ ತೇಲಾಡುವುದನ್ನು ಅವನು ಮನೋಜ್ಞವಾಗಿ ಪ್ರದರ್ಶಿಸಿದ್ದ. ಇದನ್ನು ಸಾಧಿಸಿನೋಡಬೇಕೆಂಬ ಹಂಬಲ ಅವರಿಗೆ ಉಂಟಾಯಿತು. ತನ್ನ ವಿಶ್ರಾಂತಿಧಾಮಕ್ಕೆ ಮರಳಿದವರೇ ಒಬ್ಬ ಹಿಮ್ಮೇಳದವನನ್ನು ಬರಹೇಳಿದರು. ಕಥಾ ಸಂದರ್ಭದ ಹಾಡಿಗೆ ಹೊಂದುವಂತೆ 'ತೋಳಲ್ಲೆತ್ತು, ತೋಳಲ್ಲೆತ್ತು' ಎಂಬ ಧಾಟಿಯನ್ನು ಪೆಟ್ಟಿನ ಮೂಲಕ ಅನುಸರಿಸುವಂತೆ ಅವರೇ ಹೇಳಿಕೊಟ್ಟರು. ಅದೇ ರಾತ್ರಿ ಸ್ವಾಮೀಜಿ ಬೇಟೆಗಾರನ ವೇಷ ಧರಿಸಿ ಅಭಿನಯಿಸತೊಡಗಿದರು. ಮುಂದೆ ಒಟ್ಟು ಹದಿನಾರು ಬಾರಿ ಅವರು ಈ ರಂಗವನ್ನು ಅಭಿನಯಿಸಿ ತೋರಿಸಿದರಂತೆ. ಎಲ್ಲೆಡೆ ಪ್ರೇಕ್ಷಕರು 'ಅದ್ಭುತ' ಎಂಬ ಪ್ರತಿಕ್ರಿಯೆಯನ್ನೇ ನೀಡಿದರಂತೆ. ಕಥಕ್ಕಳಿಯನ್ನು ನೋಡಿದ ಮಾತ್ರದಿಂದ ಅನುಕರಿಸಿ ಕಲಿತ ಅವರ ಸಾಮರ್ಥ್ಯ ಹೀಗೆ ವಿಶೇಷವಾಗಿದೆ.

ಸ್ವಾಮಿ ತಿರುವಡಿಗಳು ಉತ್ತರ ತಿರುವಿದಾಂಕೂರಿನ ತನ್ನ ಶಿಷ್ಯನೊಬ್ಬನ ಮನೆಯಲ್ಲಿ ವಿಶ್ರಾಂತಿಯಲ್ಲಿದ್ದರು. ಆಗ ಅನಿರೀಕ್ಷಿತವಾಗಿ ಒಬ್ಬ ಸಂಗೀತ ವಿದ್ವಾಂಸರು ಆ ಊರಿಗೆ ಬಂದರು. ಅದಾಗಲೇ ಆ ವಿದ್ವಾಂಸನಿಗೆ ಅನೇಕ ಪ್ರಶಸ್ತಿಗಳೂ ಪಾರಿತೋಷಕಗಳೂ ಸಿಕ್ಕಿದ್ದವು. ಇನ್ನಷ್ಟು ಗೌರವ ಗಳಿಸುವ ಅದಮ್ಯ ಇಚ್ಛೆ ಅವರಿಗಿತ್ತು. ಆ ಊರಿನ ಸಂಗೀತಾಸಕ್ತರು ಈ ವಿದ್ವಾಂಸನನ್ನು ಚಟ್ಟಂಬಿ ಸ್ವಾಮಿ ತಿರುವಡಿಗಳ ಭೇಟಿಗಾಗಿ ಕರೆತಂದರು. ಸ್ವಾಮೀಜಿಯ ಗಡ್ಡ ಮೀಸೆಗಳನ್ನು ಕಂಡು ಮೊದಲು ಆ ಮನುಷ್ಯನಿಗೆ ತಾತ್ಸಾರ ಭಾವವುಂಟಾಯಿತು. ಸ್ವಾಮೀಜಿ ಆತನನ್ನು ಉಪಚರಿಸಿದವರೇ ಒಂದು ಹಾಡು ಹಾಡುವಂತೆ ಹೇಳಿದರು. ಅದಕ್ಕೆ ಆ ವಿದ್ವಾಂಸ, ತಾನು ಮೃದಂಗ, ತಂಬೂರಗಳಿಲ್ಲದೆ ಹಾಡುವ ಕ್ರಮವಿಲ್ಲವೆಂದು ಮೆಲ್ಲ ಜಾರುವುದಕ್ಕೆ ಪ್ರಯತ್ನಿಸಬೇಕೆ!

"ಇಲ್ಲೊಂದು ಹಳೇ ತಂಬೂರವಿದೆ. ಹೊಂದಿಕೆಯಾದೀತೋ ನೋಡಿ" ಎನ್ನುತ್ತ ಸ್ವಾಮೀಜಿ ಅದನ್ನೆತ್ತಿ ವಿದ್ವಾಂಸರ ಮುಂದೆ ಇಟ್ಟರು. ಅವರು ಅದನ್ನು ಆಚೀಚೆ ಹೊರಳಿಸಿ ನೋಡಿ ಅಲ್ಲಿ ಇಲ್ಲಿ ಎಳೆದು ಒತ್ತಿ "ತತ್ಕಾಲಕ್ಕೆ ಇದು ಸೇರುವಂತಿಲ್ಲ" ಎಂದು ಸುಮ್ಮನಾಗಿಬಿಟ್ಟರು.

ಸ್ವಾಮೀಜಿ ಅದನ್ನು ತಕ್ಷಣ ಮೇಲೆತ್ತಿ ಸುಲಭದಲ್ಲಿ ಸರಿಪಡಿಸಿ, ಶ್ರುತಿಗೂಡಿಸತೊಡಗಿದರು. "ಇನ್ನು ಹಾಡಬಹುದು ತಾನೆ?" ಎನ್ನುತ್ತ ಅವರ ಮಡಿಲಲ್ಲಿಟ್ಟರು. ಆಗ ಆ ಮನುಷ್ಯನಿಗೆ ತಳಮಳವಾದರೂ ಹೊರಗೆ ತೋರಿಸದೆ ಹಾಡತೊಡಗಿದರು. ಸ್ವಾಮೀಜಿಯಾದರೋ ತನ್ನ ಬೆರಳಲ್ಲಿದ್ದ ಲೋಹದ ಉಂಗುರದಿಂದಲೇ ತಾಳಹಾಕತೊಡಗಿದ್ದರು. ಒಂದೆರಡು ಕೀರ್ತನೆಗಳಾದ ನಂತರ ಭಾಗವತರು ಸ್ವರವನ್ನು ಹಾಡುವುದಕ್ಕೆ ಸಿದ್ಧರಾದರು. ಅಷ್ಟರಲ್ಲಿ ಸ್ವಾಮೀಜಿ ಕೇವಲ ಬಲ ಬೆರಳ ಉಂಗುರದಿಂದಲೇ ಮೃದಂಗದ ಕೆಲವುಪೆಟ್ಟು, ಮೋರಾಗಳನ್ನು ಪ್ರಯೋಗಿಸತೊಡಗಿದರು. ಇದನ್ನು ಗಮನಿಸಿದ್ದೇ ಆ ಆತನಿಗೆ ಬೆಚ್ಚಿಬೀಳುವಂತಾಯಿತು ಮಾತ್ರವಲ್ಲ, ಇನ್ನು ಸಿಕ್ಕಿಬಿದ್ದೇನೆಂಬ ಭಯವೂ ಹೊಕ್ಕು ಸ್ವರ ಸರಿಯಾಗಿರುವಾಗಲೇ ಹಾಡು ನಿಲ್ಲಿಸಿಬಿಡೋಣ ಎಂಬಂತೆ ಕಚೇರಿಯನ್ನು ಪೂರ್ಣಮಾಡದೆ ಅಷ್ಟಕ್ಕೆ ನಿಲ್ಲಿಸಿಬಿಟ್ಟರು. ಆದರೆ ಕೊನೆಯಲ್ಲಿ ಸ್ವಾಮಿಗಳಿಂದಲೇ ಸಂಗೀತದ ಕೆಲವು ಪ್ರಮುಖ ವಿಷಯಗಳನ್ನು ತಿಳಿದುಕೊಂಡು ಹಲಕೆಲವು ಸಂದೇಹಗಳನ್ನೂ ತೀರಿಸಿಕೊಳ್ಳುವುದಕ್ಕೆ ಮರೆಯಲಿಲ್ಲ!

ಚೆಂಡೆ, ಮದ್ದಳೆ, ತಿಮಿಲ, ಖಂಜಿರ ಮುಂತಾದ್ದನ್ನು ನುಡಿಸುವುದರಲ್ಲಿ ಸ್ವಾಮಿಗಳಿಗೆ ಅಪೂರ್ವ ಸಾಮರ್ಥ್ಯವಿತ್ತು. ಕಂಡದ್ದನ್ನು ಕೇಳಿದ್ದನ್ನು ತಿಳಿಯುವುದು ಮಾತ್ರವಲ್ಲ, ಅದಕ್ಕಿಂತಲೂ ಚೆನ್ನಾಗಿ ಅನುಕರಿಸುವ ಅವರ ಸಾಮರ್ಥ್ಯ ಹೀಗೆ ಅಪೂರ್ವವೆನಿಸಿತ್ತು.

ಇನ್ನೊಂದು ಘಟನೆ : ಶ್ರೀ ಸಿ.ಎಸ್. ಸುಬ್ರಹ್ಮಣ್ಯನ್ ಪೋತ್ತಿ (ಹೈಕೋರ್ಟು ನ್ಯಾಯಾಧೀಶರು) ಹೀಗೆ ಉಲ್ಲೇಖಿಸಿದ್ದಾರೆ–

"ಕಣಿಯಾರರು ನಮ್ಮ ಮನೆಗೆ ಸಂಗೀತ ಶಿಕ್ಷಕನಾಗಿ ಬಂದ ಮೇಲೆ ಆಗಾಗ ಸಂಗೀತ ಸಭೆ ನಡೆಸುತ್ತಿದ್ದೆವು. ಅಂತಹ ಸಭೆಗಳಲ್ಲಿ ಇತರ ಆಸಕ್ತರ ಜೊತೆ ಆಗಾಗ ಸ್ವಾಮೀಜಿಯೂ ಇರುತ್ತಿದ್ದರು. ಒಮ್ಮೆ ಉತ್ತರ ಭಾರತದಲ್ಲಿ ರೆಸಿಡೆನ್ಸಿ ಗಾರ್ಡ್ ಸೇವೆ ಸಲ್ಲಿಸಿ ವಿದ್ವಾಂಸರೊಬ್ಬರು ನೀಳವಾದ ವಿಚಿತ್ರ ಸಂಗೀತೋಪಕರಣವನ್ನು ತಂದು ಅದನ್ನು ಆಕರ್ಷಕವಾಗಿ ನುಡಿಸಿ ಉತ್ತರಭಾರತದ ಕೆಲವು ಅತ್ಯುತ್ತಮ ಹಾಡುಗಳನ್ನು ಹಾಡಿದ್ದರು. ಕಾರ್ಯಕ್ರಮದ ಕೊನೆಯಲ್ಲಿ ಚಟ್ಟಂಬಿ ಸ್ವಾಮಿ ಆ ಉಪಕರಣವನ್ನು ಕೈಗೆತ್ತಿಕೊಂಡು ಶ್ರುತಿ ನೀಡಿ ನುಡಿಸತೊಡಗಿದರು. ತುಂಬ ಕೌಶಲ್ಯವುಳ್ಳ ಪಂಡಿತನಂತೆ ಅವರ ನಿರ್ವಹಣೆ ಇತ್ತು. ಕೇಳಿದ ಎಲ್ಲರೂ ಬೆರಗಾದರು! ಆ ಉಪಕರಣವನ್ನು ತಂದ ಪಂಡಿತನಿಗೂ ಆಶ್ಚರ್ಯವುಂಟಾಯಿತು. ಅವರು ಸ್ವಾಮೀಜಿಯನ್ನು ಭಕ್ತಿಯಿಂದ ವಂದಿಸಿದಾಗ ಅಂದಿನ ಸಭೆ ಧನ್ಯವಾಯಿತು. ಅಂತೂ ಮನಸ್ಸು ಮಾಡಿದರೆ ಸ್ವಾಮೀಜಿಗೆ ಅಸಾಧ್ಯವೆಂಬುದೇ ಇಲ್ಲ ಎಂಬುದು ಸತ್ಯ."

## ಹೊಸತೊಂದು ಘಟ್ಟಕ್ಕೆ

ದೊಡ್ಡಮ್ಮನ ಹೊಟ್ಟೆ ನೋವನ್ನು ವಾಸಿ ಮಾಡಿದ ನಂತರ ಸ್ವಾಮೀಜಿಗೆ ಕೇಶವ ಪಿಳ್ಳೆಯವರ ಮೂಲಕ ಚಿನ್ನದ ಆಭರಣ ಮಾಡಿಸಿದ್ದರು. ಅದನ್ನು ಒಬ್ಬ ಬ್ರಾಹ್ಮಣನಿಗೆ ದಾನಮಾಡುವ ಮೂಲಕ ಅವರು ಸುಬ್ರಹ್ಮಣ್ಯ ಪೂಜಾವ್ರತವನ್ನು ನಿಲ್ಲಿಸಿದರು. ಇದು ಅವರ ಬದುಕಿನ ಒಂದು ಪ್ರಮುಖ ಘಟ್ಟವೆನಿಸಿತು. ಸಗುಣ ಬ್ರಹ್ಮೋಪಾಸನೆಯಿಂದ ನಿರ್ಗುಣ ಬ್ರಹ್ಮೋಪಾಸನೆಗೆ ಇಷ್ಟ ದೈವಾರಾಧನೆಯ ಮೂಲಕ ಪ್ರವೇಶಿಸುವಲ್ಲಿ ಅವರು ಹೀಗೆ ಸಾಫಲ್ಯ ಕಂಡರು.

ಪ್ರತಿಯೊಂದು ಜೀವಿಯೂ ಹೀಗೆ ತನ್ನ ಜೀವನದ ವಿವಿಧ ಘಟ್ಟಗಳಿಂದ ಬಿಡುಗಡೆಯನ್ನು ಪಡೆಯುವ ಅಗತ್ಯವಿದೆ. ಚಟ್ಟಂಬಿ ಸ್ವಾಮಿಗಳು ತನ್ನ ಶಿಷ್ಯರಿಗೆ ತಾನು ತನ್ನ ಗುರುವಿನಿಂದ ಪಡೆದ ಸುಬ್ರಹ್ಮಣ್ಯ ಮಂತ್ರವನ್ನೆ ಉಪದೇಶಿಸಿಸುತ್ತ ಬಂದರು.

## ವಿದ್ಯಾಧಿರಾಜ

ಪಾಂಡಿಯಿಂದ ತಿರುವನಂತಪುರಕ್ಕೆ ಮರಳಿದಾಗ ಕುಞ್ಞನ್ ಪಿಳ್ಳೆ ಲೋಕಾತೀತ ವ್ಯಕ್ತಿಯಂತಿದ್ದರು. ವೇದೋಪನಿಷತ್ತು, ಮಂತ್ರತಂತ್ರ ಪ್ರಭೇದ, ದರ್ಶನ ಮೀಮಾಂಸೆಗಳಲ್ಲಿ ಅಗ್ಗಳನಾಗಿ ಯೋಗದ ಸಂರ್ವಾಂಗಗಳಲ್ಲಿ ಪ್ರವೀಣನಾಗಿ ಜೊತೆಗೆ ಕುಸ್ತಿ, ಮರ್ಮವಿದ್ಯೆಗಳನ್ನೂ ಅಭ್ಯಸಿಸಿಕೊಂಡು ಅಪೂರ್ವ ವ್ಯಕ್ತಿತ್ವವೆನಿಸಿದ್ದರು. ಅವರನ್ನು ಜನರು ಮಾಂತ್ರಿಕನೆಂದೂ, ಯೋಗಿಯೆಂದೂ, ಯಕ್ಷಿಣಿಗಾರನೆಂದೂ, ಪರಮಸಿದ್ಧಿಪುರುಷನೆಂದೂ ಹೀಗೆ ವಿವಿಧ ರೂಪಗಳಲ್ಲಿ ಕಂಡರು. ಒಬ್ಬೊಬ್ಬರಿಗೂ ಒಂದೊಂದು ರೀತಿಯಾಗಿ ಕಾಣುವ ಶ್ರೀಕೃಷ್ಣ ಪರಮಾತ್ಮನಂತೆ ಅವರಿದ್ದರು. ಕೇವಲ 25 ವರ್ಷ ವಯಸ್ಸಿಗೇ ತನ್ನೂರ ಜನರ ಮುಂದೆ ಹಿಮಾಲಯದಂತೆ ಬೆಳೆದರು.

ಆದರೂ ಜ್ಞಾನಕ್ಕೆ ಕೊನೆಯಿಲ್ಲ. ತಾನು ಸಂಪಾದಿಸಿದ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ಅರಿವು ತನ್ನ ನಾಡಿನ ಜನ ಸಾಮಾನ್ಯರ ಉಪಯೋಗಕ್ಕೆ ಬರಬೇಕೆಂಬ ಹಂಬಲ ಅವರಲ್ಲಿ ಮನೆಮಾಡಿತು. ಶ್ರೀಪದ್ಮನಾಭ ಸ್ವಾಮಿ ದೇವಾಲಯದ ಹಿಂದುಗಡೆ ಕೂಪಕ್ಕರವೆಂಬ ಪೋತ್ತಿಗೃಹದಲ್ಲಿ ಅಪೂರ್ವವಾದ ಮಂತ್ರತಂತ್ರ ಶಾಸ್ತ್ರ ಕೈಬರಹದ ಕೃತಿಗಳ ಶೇಖರಣೆಯಿದೆಯೆಂಬುದನ್ನು ತಿಳಿದುಕೊಂಡರು. ಅವುಗಳ ದೇವರ ಪ್ರತಿಷ್ಠೆ, ನಿತ್ಯಪೂಜೆ, ವಿಶೇಷಪೂಜೆ, ಶ್ರೀಭೂತಬಲಿಯೇ ಮುಂತಾದ ಕ್ರಿಯೆಗಳ ಕುರಿತು ನಿಷ್ಕೃಷ್ಟ ವಿವರಣೆಗಳು ಸೇರಿದ್ದುವು. ಒಮ್ಮೆ ಅವುಗಳನ್ನು ನೋಡಬೇಕೆಂಬ ಹಂಬಲ ಅವರಲ್ಲಿ ಮನೆಮಾಡಿತು. ಒಂದುದಿನ ಮಠದ ವಾರೀಸುದಾರರ ಒಪ್ಪಿಗೆ ಪಡೆದು ಗ್ರಂಥಗಳ ತಾವನ್ನು ಪ್ರವೇಶಿಸಿ ಊಟನಿದ್ದೆ ಬಿಟ್ಟು ಮೂರು ನಾಲ್ಕು ದಿನ ನೂಕಿ ಸಿಕ್ಕಿದ ಅವಕಾಶವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡರು.

ಒಂದೇ ಒಂದು ಗ್ರಂಥವನ್ನು ಹೊರಗೆ ಒಯ್ಯಬಾರದೆಂಬ ನಿಬಂಧನೆಯಿದ್ದೂ ಒಮ್ಮೆ ಓದಿದರೆ ತಿಳಿದುಕೊಳ್ಳುವ ಸಾಮರ್ಥ್ಯವಿದ್ದುದರಿಂದಲೂ ಅವರು ನೂರಾರು ಗ್ರಂಥಗಳನ್ನು ಪರಾಮರ್ಶಿಸಿ ಧನ್ಯರಾದರು. ಅಲ್ಲಿಂದ ಹೊರಗೆ ಬಂದ ಕುಞ್ಞನ್ ಪಿಳ್ಳೆಯವರೊಂದಿಗೆ "ಏನೆಲ್ಲ ನೋಡಿದಿರಿ?" ಎಂದು ಮಠದ ಯಾಜಮಾನ ಪ್ರಶ್ನಿಸಿದಾಗ "ಇರುವುದೆಲ್ಲವನ್ನು ನೋಡಿದೆ" ಎಂಬ ಉತ್ತರ ಕೇಳಿ ಆಶ್ಚರ್ಯವೆನಿಸಿತ್ತು. ಮೊದಲು ಸಾಮಾನ್ಯ ಮಂತ್ರಸಿದ್ಧಿಗಳ ಬಗ್ಗೆ ಪ್ರಶ್ನಿಸುತ್ತಿದ್ದಂತೆ ತನಗೇ ಸಾಕಷ್ಟು ಪರಿಜ್ಞಾನವಿಲ್ಲದ ವಿಷಯಗಳ ಕುರಿತು ಕುಞ್ಞನ್ ಪಿಳ್ಳೆ ನಿಖರವಾಗಿ ವಿವೇಚಿಸಿದ್ದನ್ನು ಗಮನಿಸಿ ಆಶ್ಚರ್ಯಗೊಂಡರು. ತಕ್ಷಣ ಅವರು ಕುಞ್ಞಾ "ನೀನು ವಿದ್ಯಾಧಿರಾಜನೇ ಸರಿ" ಎಂದು ಕೊಂಡಾಡಿದರು. ಹೀಗೆ ಸ್ವಾಮಿಗಳಿಗೆ ವಿದ್ಯಾಧಿರಾಜನೆಂಬ ಬಿರುದು ತಾನಾಗಿ ಜನಜನಿತವಾಯಿತು.

ಈ ಹೊಸ ಅರಿವನ್ನು ಸ್ವಾಮೀಜಿ ನಾರಾಯಣ ಗುರುಗಳಿಗೆ ದಾಟಿಸಿದ್ದರು. ಹಾಗೇ ನೀಲಕಂಠದಾಸ ಶ್ರೀಪಾದರೆಂಬ ಇನ್ನೊಬ್ಬ ಶಿಷ್ಯ ರಚಿಸಿದ "ದೇವಾರ್ಚನಾ ಪದ್ಧತಿ" ಎಂಬ ಗ್ರಂಥದಲ್ಲಿ ಕೂಡಾ ಚಟ್ಟಂಬಿಯವರ ಆಶೀರ್ವಾದ ಕೆಲಸ ಮಾಡಿದೆ. ತಾನೇ ರಚಿಸಿದ ಶ್ರೀಚಕ್ರ ಪೂಜಾಕಲ್ಪ, ದೇವೀಮಾನಸ ಪೂಜಾಸ್ತೋತ್ರ ವ್ಯಾಖ್ಯಾನಗಳಂತಹ ಕೃತಿಗಳಲ್ಲಿ ಮಂತ್ರ ತಂತ್ರಶಾಸ್ತ್ರಗಳ ಅನುಭವ ಮಡುಗಟ್ಟಿ ನಿಂತಿವೆ. ಕೇರಳದಲ್ಲಿ ಬ್ರಾಹ್ಮಣೇತರರು ವಿಗ್ರಹಪೂಜಾ ವಿಧಾನಗಳನ್ನು ಕಲಿಯುವುದಕ್ಕೆ ಈ ಕೃತಿಗಳು ಮೂಲ ಪ್ರೇರಣೆಯಾಗಿವೆ. ಹಾಗೆ ಸ್ವಾಮೀಜಿ ಹೊಸತೊಂದು ಯುಗಕ್ಕೆ ನಾಂದಿ ಹಾಡಿದವರೆನ್ನಿಸಿದರು.

## ಮಂತ್ರ–ತಂತ್ರ–ಔಷಧ–ಜ್ಯೋತಿಷ – ವ್ಯಾಕರಣ

ಸ್ವಾಮೀಜಿಯುವರ ಉಪದೇಶದ ರೀತಿ ರೋಮಾಂಚವುಂಟು ಮಾಡುತ್ತಿತ್ತೆಂಬುದಕ್ಕೆ ಅವರು ಮಹಿಳೆಯೊಬ್ಬರಿಗೆ ನೀಡಿದ ಉಪದೇಶದ ಉದಾಹರಣೆ ಸಾಕು – "ಕೆಲವರು ಹಣಕ್ಕಾಗಿ ಮಂತ್ರ ಮಾರುವುದಕ್ಕೆ ಊರು ಸುತ್ತುತ್ತಾರೆ. ಕಲ್ಯಾಣಿಯಮ್ಮ ಅವರಿಂದ ಕೊಳ್ಳುವುದಕ್ಕೆ ಹೋಗಬೇಡ. ಒಂದು ಒಳ್ಳೆಯ ದೀಪ ಹಚ್ಚಿ, ಅದರ ಮುಂದೆ ಭಗವತಿಗಾಗಿ ಸುಗಂಧಯುಕ್ತವಾದ ಹೂಗಳನ್ನಿಟ್ಟು ವೀಣೆಯ ತಂತಿಗಳನ್ನು ಮೆಲುವಾಗಿ ಮೀಟುತ್ತ ನೀನು ಲಲಿತಸಹಸ್ರನಾಮವನ್ನು ಪಾರಾಯಣ ಮಾಡುತ್ತ ಹೋಗು. ಎಲ್ಲ ಅಭೀಷ್ಟಗಳೂ ಈಡೇರುತ್ತವೆ".

ಈ ಮೇಲಿನ ಮಾತನ್ನು ಸಾಹಿತ್ಯ ಕುಶಲನೆಂಬ ಅಬಿಧಾನವುಳ್ಳ ಶ್ರೀ ಟಿ.ಕೆ. ಕೃಷ್ಣ ಮೆನನ್ ಅವರ ಕೃತಿಯಿಂದ ಆಯಲಾಗಿದೆ. ಒಮ್ಮೆ ಪಾದಯಾತ್ರೆಯ ನಡುವೆ ಹತ್ತಿರದ ದೇವಾಲಯದಿಂದ ಚೆಂಡೆಯ ಪೆಟ್ಟು ಕೇಳಿದವರೇ ಸ್ವಾಮೀಜಿ ಕೊಳದಲ್ಲಿ ಸ್ನಾನ ಮುಗಿಸಿ ಒಳಗೆ ಬಂದು ಅಲ್ಲಿದ್ದವರಿಂದ ತಿಮಿಲವನ್ನು ಕೇಳಿ ಪಡೆದು ಬಾರಿಸತೊಡಗಿದರಂತೆ. ಭೂತಬಲಿಗೆ ಚೆಂಡೆ ವಾದನ ಮಾಡುತ್ತಿದ್ದ ಒಬ್ಬ ಅನುಭವಿ ಈ ಆಗಂತುಕನ ವಾದನ ವೈಖರಿಯನ್ನು ಗಮನಿಸಿ

ಮುಂದುವರಿಯಿತಂತೆ! ಇನ್ನೂ ಮುಗಿಯದ ಕಾರ್ಯಕ್ರಮದಿಂದ ಕಂಗೆಟ್ಟ ದೇವಾಲಯದ ಅಧಿಕಾರಿ ವರ್ಗ, ದೀಪಕ್ಕೆ ಬೇಕಾದ ಎಣ್ಣೆ ಮುಗಿಯುತ್ತ ಬಂದಿದೆ ಎಂದು ಕೈಮುಗಿದು ಬೇಡಿಕೊಳ್ಳಬೇಕಾಯಿತಂತೆ!

ಸ್ವಾಮೀಜಿಯವರ ಕರುಣೆ ಮತ್ತು ಆಶೀರ್ವಾದಗಳಿಗೆ ಪಕ್ಕಾಗಿದ್ದ ಫಲಾನುಭವಿಯೊಬ್ಬರಾದ ಟಿ. ಕುಞ್ಞುಣ್ಣಿ ಮೆನೋನ್, ಎಂ.ಎ.ಎಲ್.ಟಿ. ಹೇಳುವ ಕಥೆ ಬೇರೆಯೇ ಇದೆ. ತನ್ನ ಮಗ ಅರವಿಂದಾಕ್ಷನನ್ನು ಹದಿನೈದು ವರ್ಷಗಳಿಂದ ಕಾಡುತ್ತಿದ್ದ ಅಪಸ್ಮಾರ ರೋಗದಿಂದ ಅವರು ಕಂಗೆಟ್ಟಿದ್ದರು. ಕ್ಷೇತ್ರವೊಂದರಲ್ಲಿ ವಿಶ್ರಮಿಸುತ್ತಿದ್ದ ಸ್ವಾಮೀಜಿಯವರನ್ನು ಭೇಟಿಯಾದರು. ದು:ಖವನ್ನು ತೋಡಿಕೊಂಡರು. ಸ್ವಾಮೀಜಿ ತಕ್ಷಣ ಅವರ ಮನೆಗೆ ಬಂದರು. ಹುಡುಗನಿಗೆ ಹಲವು ಬಗೆಯ ಹೊಗೆಗಳನ್ನು ಪರಿಮಳಿಸಿ ತಂದೆಗೆ ಒಂದು ಮಂತ್ರವನ್ನು ಉಪದೇಶಿಸಿ ಸಾವಿರ ಸಲ ಜಪ ಮಾಡುವುದಕ್ಕೆ ಹೇಳಿದರು. ಹುಡುಗನ ರೋಗ ಸಂಪೂರ್ಣ ವಾಸಿಯಾಗಿಬಿಟ್ಟಿತು. ಆಮೇಲೆ ಮೆನೋನ್ನರು ತನ್ನ ಮನೆಗೆ ಯಾವುದೇ ಮಂತ್ರವಾದಿಯನ್ನು ತರಿಸಿದ್ದೇ ಇಲ್ಲವಂತೆ.

ಸುಪ್ರಸಿದ್ಧ ಸಾಹಿತಿ ಶ್ರೀ ಕೆ. ಕುಮಾರ ಪಿಳ್ಳೆಯ ಅನುಭವ ಮತ್ತೊಂದಿದೆ. ಇದು ಸ್ವಾಮೀಜಿಯವರ ಔಷಧ ಪ್ರಯೋಗದ ಕುರಿತಾದ್ದು. ಒಮ್ಮೆ ಸ್ವಾಮೀಜಿ ಮೂವಾಟ್ಟುಪುಳದಿಂದ ಪೆರುಂಬಾವೂರಿಗೆ ಪಾದಯಾತ್ರೆಯಲ್ಲಿ ತಲುಪಿದರು. ಒಂದು ಮನೆಯ ಮುಂದೆ ನಿಂತು ಬಾಯಾರಿಕೆಗೆ ಕೇಳಿದರು. ಹೊರಬಂದ ಮನೆಯೊಡತಿ ಆ ಪ್ರದೇಶದಲ್ಲಿ ವಿಷೂಚಿಕಾ (ಕಾಲರಾ) ರೋಗ ಹಬ್ಬಿ ಅನೇಕ ಸಾವುಗಳಾಗಿವೆಯೆಂದೂ, ಅದೇ ಮನೆಯಲ್ಲಿ ನಾಲ್ಕು ಜನ ಸತ್ತು ಈಗ ಮೂವರು ರೋಗಬಾಧೆಯಿಂದ ಮಲಗಿರುವುದಾಗಿಯೂ ಹೇಳಿದಳು. ಇಂತಹ ಪರಿಸ್ಥಿತಿಯಲ್ಲಿ ಇಲ್ಲಿನ ನೀರು ತಕ್ಕುದಲ್ಲವೆಂಬುದು ಅವಳ ಮಾತಿನ ಇಂಗಿತ. ಸ್ವಾಮೀಜಿ ತಕ್ಷಣ ಒಂದು ಸೀಯಾಳ ಸಿಕ್ಕಿದರಾಗಬಹುದೆಂದು ಹೇಳಿದರು. ಆ ಮುದುಕಿ ಅದಕ್ಕೆ ವ್ಯವಸ್ಥೆ ಮಾಡಿದಳು. ತನ್ಮಧ್ಯೆ ಸ್ವಾಮೀಜಿ ಹತ್ತಿರದ ಹಿತ್ತಿಲಿನಿಂದ ಯಾವುದೋ ಮೂಲಿಕೆಯನ್ನು ಕಿತ್ತುತಂದು ಸೀಯಾಳದ ಸಿಪ್ಪೆಯೊಂದಿಗೆ ಜಜ್ಜಿ ಅದರ ನೀರಿಗೆ ಬೆರೆಸಿ ಕೊಟ್ಟು ಆ ರೋಗಿಗಳಿಗೆ ಕುಡಿಸುವಂತೆ ಹೇಳಿದರು. ಕುಡಿದ ಸ್ವಲ್ಪ ಹೊತ್ತಿನೊಳಗೆ ಗಂಜಿ ಬೇಕೆಂದು ಕೇಳಿದರೆ ಕೊಟ್ಟುಬಿಡಿ ಎಂದೂ ಸೂಚಿಸಿ ಸ್ವಾಮೀಜಿ ಅಲ್ಲಿಂದ ಹೋಗಿಬಿಟ್ಟರು. ಎಲ್ಲ ಹೇಳಿದಂತೆಯೇ ನಡೆಯಿತು. ರೋಗಿಗಳು ಮೆಲ್ಲನೆ ಸುಧಾರಿಸಿಕೊಂಡು ರೋಗಮುಕ್ತರಾದರು.

ಕವಿದೀಪ ಪ್ರಶಸ್ತಿ ವಿಜೇತ ಆರಮ್ಮಳ ನಾರಾಯಣ ವೈದ್ಯರು ಸ್ವಾಮೀಜಿಯ ಶಿಷ್ಯನಾದ ನೀಲಕಂಠ ತೀರ್ಥಪಾದರಿಂದ ಉಪದೇಶ ಪಡೆದರು. ಇಷ್ಟಾಗಿಯೂ ಅನೇಕ ಸಂದರ್ಭಗಳಲ್ಲಿ ಅವರು ಚಟ್ಟಂಬಿ ಸ್ವಾಮಿಯವರನ್ನು ಭೇಟಿಯಾಗುತ್ತಿದ್ದರು.

ತನ್ನ ಗುರುವಿಗೆ ಆರಾಧ್ಯದೈವದಂತಿದ್ದ ಸ್ವಾಮೀಜಿಯ ಕುರಿತು ಅವರೂ ಲೇಖನಗಳನ್ನು ಬರೆದಿದ್ದಾರೆ. ಅಂತಹ ಲೇಖನವೊಂದರಲ್ಲಿ ಈ ಮಾಹಿತಿಯಿದೆ –

"ಹಠಯೋಗ ಅಭ್ಯಸಿಸುವವರು ಪ್ರಾಣಾಯಾಮವನ್ನು ಸಮರ್ಪಕವಾಗಿ ಮಾಡಬೇಕು. ಇಲ್ಲವಾದರೆ ಕಣ್ಣು ಮುಚ್ಚಿದಾಗ ಬೆಂಕಿ ಕಾಣುತ್ತದೆ. ನಿದ್ದೆಯೂ ಬೀಳುವುದಿಲ್ಲ. ಇಂತಹ ತೊಂದರೆಗೆ ಸುಲಭದ ಪರಿಹಾರ ಹೇಳಿದ್ದಲ್ಲದೆ ಅದನ್ನು ಅವರು ನನಗೂ ಉಪದೇಶಿಸಿದರು.

"ಎರಡು ವರ್ಷಗಳ ಹಿಂದೆ ನನ್ನ ಒಬ್ಬ ಯೋಗಾಭ್ಯಾಸಿ ಭಕ್ತನಿಗೆ ಇಂತಹ ತೊಂದರೆ ಕಾಣಿಸಿಕೊಂಡಿತು. ಈ ಕುರಿತು ಸುಭಾಷಿಣಿ ಪತ್ರಿಕೆಯ ಸಂಪಾದಕರು ನನ್ನಲ್ಲಿ ಹೇಳಿಕೊಂಡರು. ವ್ಯಕ್ತಿಯನ್ನು ನನ್ನ ಬಳಿಗೆ ಕರೆದೂ ತಂದರು. ಚಟ್ಟಂಬಿ ಸ್ವಾಮಿಗಳು ಸಲಹೆ ನೀಡಿದ ಔಷಧಿಯನ್ನು ತಯಾರಿಸಿ ಅವನ ಪಾದದ ಅಡಿಗೆ ಹಚ್ಚಿದೆ. ಹತ್ತೇ ನಿಮಿಷಗಳಲ್ಲಿ ಆ ವ್ಯಕ್ತಿಗೆ ನಿದ್ದೆ ಬಂತು. ರಾತ್ರಿ ಒಂದೆರಡು ಬಾರಿ ಎಚ್ಚರವಾಗಿಯೂ ಮತ್ತೆ ಮಲಗಿದ. ಮರುದಿನ ಏಳು ಗಂಟೆಯಾಗಿಯೂ ಏಳದಿದ್ದಾಗ ಕರೆದು ಎಬ್ಬಿಸಿದೆ. ಆಮೇಲೆ ಅವನಿಗೆ ಇಂತಹ ತೊಂದರೆಯಾಗಲೇ ಇಲ್ಲ. ಸ್ವಾಮೀಜಿ ಉಪದೇಶಿಸಿದ ಔಷಧದ ಮಹಾತ್ಮೆ ಹೀಗೆ ನನಗೆ ನಿಚ್ಚಳವಾಯಿತು"

ಪ್ರಾಕ್ಕುಳಂ ನಾರಾಯಣ ಪಿಳ್ಳೆ ಹೀಗೆ ಹೇಳಿದ್ದಾರೆ – "ವೈದ್ಯ ಶಿರೋಮಣಿ ಎನ್. ಕೃಷ್ಣ ಕುರುಪ್ಪ್ ವೈದ್ಯರು ಒಮ್ಮೆ ಸ್ವಾಮೀಜಿಯನ್ನು ಭೇಟಿಯಾದರು. ವಂದಿಸಿಕೊಂಡು ಸೋಫಾದ ಪಕ್ಕದಲ್ಲಿ ಶಿಷ್ಯನಂತೆ ನಿಂತುಕೊಂಡರು. ಹತ್ತಿರವೇ ನಾನೂ ಇದ್ದೆ. ಸ್ವಾಮೀಜಿ ವೈದ್ಯರ ತಲೆಯ ಮೇಲೆ ಬೆರಳು ತಾಗಿಸಿ ಅಲುಗಾಡಿಸಿ ನೋಡಿದವರಂತೆ ಮಾಡಿ ವೈದ್ಯರಿಗೆ ತಲೆ ಇದೆಯೆಂಬಂತೆ ನನ್ನೆಡೆ ನೋಡಿ ಸೂಚಿಸಿದರು. "ಅಷ್ಟಾಂಗ ಹೃದಯದಲ್ಲಿ ಶಸ್ತ್ರಕ್ರಿಯೆಯ ಕುರಿತು ಏನೂ ಹೇಳಿಲ್ಲವಲ್ಲ ಸ್ವಾಮೀಜಿ" ಎಂದು ಅವರು ಪ್ರಶ್ನಿಸಿದರು. ಸ್ವಾಮೀಜಿಯ ಪ್ರತಿಕ್ರಿಯೆಯೊಂದಿಗೆ ಅವರೊಳಗೆ ಆಯುರ್ವೇದದ ಗಹನ ವಿಚಾರಗಳ ಚರ್ಚೆಯೇ ನಡೆದುಬಿಟ್ಟಿತು. ಅವರ ಮಾತುಕತೆಯಿಂದ ನನಗೆ ನರಗಳು ಗಂಟು ಕಟ್ಟಿದಾಗ ಉಜ್ಜಿಸುವುದು ಕೂಡಾ ಆಯುರ್ವೇದದ ಶಸ್ತ್ರಕ್ರಿಯೆಯೆನ್ನಿಸೀತೆಂಬ ವಿಚಾರ ಗೊತ್ತಾಯಿತು."

ಸ್ವಾಮೀಜಿ ಹಾಗೂ ಯುನಾನಿ ವೈದ್ಯರೊಳಗೆ ನಡೆದ ಸಂವಾದವನ್ನು ಇನ್ನೊಬ್ಬ ಲೇಖಕ ವಿಳಪ್ಪಿಲ್ ಪದ್ಮನಾಭ ಪಿಳ್ಳೆ ಹೀಗೆ ಬರೆದಿದ್ದಾರೆ – "ಸ್ವಾಮೀಜಿ : ಇಲ್ಲಿ ಡಾ। ಕೆ.ಜಿ. ಗೋಪಾಲ ಪಿಳ್ಳೆ ಎಂದೊಬ್ಬರು ವೈದ್ಯರಿದ್ದಾರೆ. ಆಯುರ್ವೇದ, ಅಲೋಪತಿ, ಚಿಂತಾಮಣಿ ಮುಂತಾದ ಎಲ್ಲ ಪ್ರಕಾರಗಳೂ ಅವರಿಗೆ ಗೊತ್ತು. ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ಪಾಸಾಗಿದ್ದಾರೆ. ಬಹುಶ: ಅವರನ್ನು ಭೇಟಿಯಾಗಲಿಕ್ಕಾಗಿ ಬಂದಿರೆಂದು ತೋರುತ್ತದೆ".

"ಅಲ್ಲ ಸ್ವಾಮಿ ತಮ್ಮನ್ನೇ ಭೇಟಿಯಾಗಲು ಬಂದಿದ್ದೇನೆ. ಒಂದು ಸಂದೇಹ ನನ್ನನ್ನು

ಕಾಡುತ್ತಿದೆ. ಎಲ್ಲ ರೋಗಕ್ಕೂ ಒಂದು ಕಾರಣವಿರುತ್ತದಲ್ಲ. ಅವುಗಳಿಗೆ ನೀಡುವ ಚಿಕಿತ್ಸೆ ಯಾಕೆ ಸ್ವಾಮೀ ಬೇರೆ ಬೇರೆ ಬಗೆಯ ವೈದ್ಯಕೀಯ ವಿಧಾನಗಳನ್ನು ಹೇಳಿದೆ?"

"ಅದರ ವಿಚಾರ ವೈದ್ಯರಿಗಲ್ಲದೆ ನನಗೇನು ಗೊತ್ತು? ನೀವು ಹೇಳುವ ರೋಗಗಳ ಮೂಲಕ್ಕೆ ಒಂದೇ ಚಿಕಿತ್ಸೆ ಮದ್ದಾಗುವುದು. ಅದು ನಿಜವೇ. ಒಂದು ದೃಷ್ಟಿಯಿಂದ ನೋಡಿದರೆ ಸರ್ವರೋಗ ಪರಿಹಾರಕ್ಕೆ ಒಂದು ದಾರಿ ಇದೆ. ಅದನ್ನು ಕಲಿಯುವುದು ಸುಲಭವಲ್ಲ".

"ನಾವು ಅದನ್ನು ತಿಳಿದುಕೊಳ್ಳಬೇಕಾದ್ದಿದೆಯಲ್ಲ"

"ಮತ್ತೆ ಬಡಗು ದೇಶದ ಇಂಥಲ್ಲಿ ಒಬ್ಬ ನಂಬೂದಿರಿಯ ಮನೆ ಇದೆ. ಆ ಮನೆಯ ಮೂಸ್ಸದ್‌ರ ಒಪ್ಪಿಗೆಯಿಂದ ಅವರ ಗ್ರಂಥಭಂಡಾರವನ್ನು ಪರೀಕ್ಷಿಸಿದ್ದೇನೆ. ಅಲ್ಲಿ ಅನೇಕ ಗ್ರಂಥಗಳುಂಟು. ಆದರೆ ತಾಮ್ರದ ತಗಡುಗಳಿಂದ ಮಾಡಿದ ಗ್ರಂಥವೊದರಲ್ಲಿ ನೀವು ಹೇಳುವ ಚಿಕಿತ್ಸಾ ವಿಧಾನವಿದೆ. 'ಸಪ್ತರ್ಷಿ ಸಂವಾದಂ' ಎಂಬುದು ಅದರ ಹೆಸರು. ಉಳಿದ ಆರು ಋಷಿಗಳು ಸೇರಿ ವಸಿಷ್ಠನೊಂದಿಗೆ ನಾಸ್ತಿಕವಾದ ಹೂಡುತ್ತಾರೆ. ಅವರು ಕೊಟ್ಟ ಉದಾಹರಣೆಗಳನ್ನೇ ತಿರುಗಿಸಿ ವಸಿಷ್ಠ ಮಹರ್ಷಿ ದೇವರ ಅಸ್ತಿತ್ವವನ್ನು ಸ್ಥಾಪಿಸುತ್ತಾರೆ. ಇದೇ ಆ ಗ್ರಂಥದ ಮುಖ್ಯಸಾರ. ಈಗ ಹೇಳುವ ಮೆಸ್ಮರಿಸಂ ಮುಂತಾದ್ದನ್ನೆಲ್ಲ ಮೀರಿದ ಯಾವುದೋ ವಶೀಕರಣ ವಿಧಾನ ಹಾಗೂ ಚಿತ್ತೈಕಾಗ್ರತೆಗಳ ಕುರಿತು ಅದರಲ್ಲಿ ವಿವರಿಸಲಾಗಿದೆ. ಅದನ್ನು ಅಭ್ಯಸಿಸಿದರೆ ಎಂಥವರನ್ನೂ ನೋಟದಿಂದಲೇ ಸಮ್ಮೋಹನಕ್ಕೊಳಪಡಿಸಬಹುದು. ಎಂತಹ ರೋಗವನ್ನೂ ವಾಸಿಮಾಡಬಹುದು. ಆದರೆ ಅದನ್ನು ಅಭ್ಯಸಿಸುವುದಕ್ಕೆ ತುಂಬಾ ಕಷ್ಟವಿದೆ".

ಇಲ್ಲಿ ಅವರ ಅಧ್ಯಯನ ವ್ಯಾಪ್ತಿಯನ್ನೂ, ವಿಷಯ ಸಂಗ್ರಹ ವಿಧಾನ ಮತ್ತು ತನ್ನ ಅರಿವಿನ ಬಗ್ಗೆ ಪ್ರಾಮಾಣಿಕ ಅಭಿಪ್ರಾಯಗಳನ್ನೂ ಗಹನವಾದ ವಿಷಯಕ್ಕೆ ಅದರ ಗೌರವ ನೀಡುವ ವಿಶಾಲತೆಯನ್ನೂ ಸ್ಪಷ್ಟವಾಗಿ ಕಾಣಬಹುದು.

ಮತ್ತೊಮ್ಮೆ ಸ್ವಾಮಿಗಳ ಬಳಿಗೆ ಶಿಷ್ಯನೂ, ಸನ್ಮಿತ್ರನೂ ಆದವರೊಬ್ಬರು ಬಂದರು. ಜೊತೆಗೆ ಒಬ್ಬ ಕಣಿಯಾರ್ ಜ್ಯೋತಿಷ್ಯರು ಇದ್ದರು. ಈ ಸಂಭಾಷಣೆ ಆ ಸಂದರ್ಭದಲ್ಲಿ ನಡೆಯಿತು.

"ಅಪ್ಪನ್, ಹಾಗಿದ್ದರೆ ಜ್ಯೋತಿಷ್ಯದಲ್ಲಿ ಎಷ್ಟು ಗ್ರಂಥಗಳನ್ನು ಓದಿದ್ದಿ?"

"ಹೆಚ್ಚುಕಡಿಮೆ ಇಪ್ಪತ್ತು"

"ಅಷ್ಟೇನಾ? ಇದೊಂದು ಅಪಾರ ಶಾಸ್ತ್ರ ವಿಷಯ. ಯಾವುದೇ ಅಗತ್ಯವಿಲ್ಲದೆಯೂ ನಾನೇ ಐನೂರಕ್ಕಿಂತ ಹೆಚ್ಚು ಪುಸ್ತಕ ತಿರುವಿಹಾಕಿದ್ದೇನಲ್ಲ. ಅಪ್ಪಾ! ನೀನು ಇನ್ನೂ ತುಂಬಾ ಓದಿ ಅಭ್ಯಸಿಸಬೇಕು."

ಕಣಿಯಾರರ ಜ್ಞಾನದಲ್ಲಿ ಕುಂದುಕೊರತೆಗಳಿದ್ದೂ ಸ್ವಾಮೀಜಿ ಮಾತ್ರ ಅವರನ್ನು ಚೆನ್ನಾಗಿ ಸತ್ಕರಿಸಿ ಬೀಳ್ಕೊಟ್ಟರು.

ಇರಿಂಜಾಲಕ್ಕುಡದಲ್ಲಿ ಒಬ್ಬ ಹೆಸರಾಂತ ಸಂಸ್ಕೃತ ಪಂಡಿತರಿದ್ದರು. ಅವರು ಸ್ವಾಮೀಜಿಯ ಸರಳತೆಯನ್ನು ಕಂಡು ಸಾಮಾನ್ಯನೆಂಬಂತೆ ಮಾತನಾಡಿಸಿದರು. ಸಂವಾದ ಮುಖ್ಯವಾಗಿ ವ್ಯಾಕರಣ ಶಾಸ್ತ್ರದ ಸುತ್ತ ಇತ್ತು. ಸಂವಾದದ ಒಂದು ಘಟ್ಟದಲ್ಲಂತೂ ವ್ಯಾಕರಣ ಪಂಡಿತರು ಬೆವರತೊಡಗಿದರು. ಕೂಡಲೇ ತನ್ನ ಸೋಲನ್ನು ಒಪ್ಪಿಕೊಂಡರು. ಸೌಜನ್ಯಮೂರ್ತಿಯಾದ ಸ್ವಾಮೀಜಿ ಈ ಸಂದರ್ಭದಲ್ಲಿ ಒಂದು ಸರಳ ಪ್ರಶ್ನೆಯನ್ನು ಮುಂದಿಟ್ಟರು.

"ವ್ಯಾಕರಣ ಮಾತ್ರೆಗಳು ಅ. ಇ. ಉಣ್. ಎ. ಓಙ್ ಮುಂತಾಗಿ ಆರಂಭವಾಗೊಳ್ಳುತ್ತದೆ ತಾನೆ? 'ಅ'ದಿಂದ ಆರಂಭವಾಗುವುದಕ್ಕೆ ಏನಾದರೂ ಪ್ರತ್ಯೇಕ ಕಾರಣಗಳಿವೆಯೆಂದೆನಿಸುತ್ತದೆಯೆ?"

"ಅಂತಹ ಯಾವುದೇ ವಿಚಾರವನ್ನು ಪಾಣಿನಿ ಅಥವಾ ಪತಂಜಲಿ ಉಲ್ಲೇಖಿಸಿಲ್ಲ. ಹಾಗೆ ಗುರುಗಳಾರೂ ಕಲಿಸಿದ್ದೂ ಇಲ್ಲ."

"ಹಾಗಲ್ಲ ಮಾನವನ ಉತ್ಪತ್ತಿಗೂ ಭಾಷೆಯ ಉಗಮಕ್ಕೂ ಪರಸ್ಪರ ಸಾಮ್ಯತೆ ಇದೆ ಎಂಬುದಕ್ಕೆ ವಿಶೇಷ ವಿವರಣೆ ಬೇಕಿಲ್ಲ ತಾನೆ? ಗರ್ಭದಲ್ಲಿರುವಾಗ ಮಾತ್ರವಲ್ಲ, ಹಿಂದಿನಿಂಲೂ ಜೀವಿ ಪೂರ್ಣ ಮೌನವನ್ನೇ ಆಚರಿಸುತ್ತಿರುವುದು. ಶಿಶುಜನನಾ ನಂತರ ಮೊದಲ ಬಾರಿ ಮೌನವನ್ನು ಮುರಿಯುತ್ತದೆ. 'ಅ'ಕಾರೋಚ್ಚಾರದ ಮೂಲಕ ಮೌನಾಂತ್ಯವಾಗುತ್ತದೆ. ಅದಕ್ಕೇ ಭಾಷೆಯ ಅಕ್ಷರಮಾಲೆ 'ಅ' ಕಾರ ಪೂರ್ವಕವಾಗಿರುವ ಔಚಿತ್ಯವನ್ನು ಗಮನಿಸೋಣ. ಗರ್ಭಾವಸ್ಥೆಯ ಕ್ಲೇಶಗಳಿಂದ ವಿಮುಕ್ತವಾದ ಸಂತೋಷ ಒಂದು ನಗುವಿನ ಮೂಲಕ ಪಸರಿಸುವ ಕಾರಣ 'ಇ' ಕಾರೋಚ್ಚಾರವಾಗುತ್ತದೆ. ಆಮೇಲೆ ಶಿಶುವಿಗೆ ಬಾಹ್ಯ ಪ್ರಕೃತಿಯ ಶಬ್ದಾದಿಗಳಿಂದ ಭಯವುಂಟಾಗುತ್ತದೆ. ತಾನೆ? ಅದರಿಂದಾಗಿ ಮಗು ಹೆದರಿಕೊಂಡು 'ಉ'ಕಾರೋಚ್ಚಾರಕ್ಕೆ ಕಾರಣವಾಗುವುದು."

ಈ ವ್ಯಾಖ್ಯಾನವನ್ನು ಕೇಳಿ ಅಚ್ಚರಿಗೊಂಡು ಪಂಡಿತರು ಸ್ವಾಮೀಜಿಗಳ ಪಾದಕ್ಕೆರಗಿ ಬೀಳ್ಕೊಂಡರು.

ಸ್ವಾಮೀಜಿಯವರ ಒಡನಾಟವಿದ್ದವರು, ಭಕ್ತರು, ಶಿಷ್ಯರು, ಅಭಿಮಾನಿಗಳು ಮಾತ್ರವಲ್ಲ ಅನಿರೀಕ್ಷಿತ ಭೇಟಿ ಪಡೆದವರು, ಅಧಿಕಾರ ವರ್ಗದವರು ಕೂಡ ಇಂತಹ ಅನೇಕ ಸ್ಮರಣೆಗಳನ್ನು ಮುಂದಿಟ್ಟಿದ್ದಾರೆ.

## ಚಿತ್ರಕಲಾಸಕ್ತಿ

ಪೇಟ್ಟಯಿಲ್ ಪರಮೇಶ್ವರನ್ ಎಂಬವರ ಅಭಿಪ್ರಾಯದಂತೆ ಸ್ವಾಮೀಜಿಗೆ ಚಿತ್ರಕಲೆ ಕಲಿಸಿದವನು ನೀಲಕಂಠನ್ ಆಶಾರಿ. ಆತ ಆ ಕಾಲದಲ್ಲಿ ದಂತ ಕೆತ್ತನೆಯ ನಿಪುಣ. ಕಾರ್ಟೂನು ಶೈಲಿಯ ಚಿತ್ರಗಳನ್ನು ಬರೆಯುತ್ತಿದ್ದ ಸ್ವಾಮೀಜಿಗೆ ಚಿತ್ರಕಲೆಯಲ್ಲಿ

ಕೈ ಚಳಕ ಸಿದ್ಧಿಸಿತ್ತು. ಒಬ್ಬನೇ ವ್ಯಕ್ತಿಯನ್ನು ಐದು ಬಗೆಯ ವೇಷಭೂಷಣಗಳಿಂದ ಒಪ್ಪುವಂತೆ ತಾನೇ ಬರೆದ ಒಂದೇ ಚಿತ್ರದಲ್ಲೇ ಬದಲಾವಣೆಗಳನ್ನು ತರುತ್ತಿದ್ದರು.

ಹುಳಿಯಾದ ಮಾವಿನಕಾಯಿ ತಿಂದು ಮುಖವನ್ನು ಹುಳಿ ಹುಳಿ ಮಾಡಿ ಕೊಂಡ ಸಾಹೇಬರ ಸ್ವರೂಪವನ್ನು ಸ್ವಾಮೀಜಿ ಪೆನ್ಸಿಲ್‌ನ ರೇಖೆಗಳಿಂದ ಬರೆದಿದ್ದರು. ಅದು ಕೆಲವು ವರ್ಷಗಳ ಕಾಲ ಪನ್ಮನ ಆಶ್ರಮದಲ್ಲಿ ಇತ್ತು. ಇಂತಹ ಸ್ವಭಾವ ಚಿತ್ರಗಳನ್ನು ಅವರು ಕೆಲವೊಮ್ಮೆ ತನ್ನ ಸುತ್ತ ಸೇರಿದ ಮಕ್ಕಳಿಗೆ ಖುಶಿ ಕೊಡುವ ಸಲುವಾಗಿ ಬರೆಯುತ್ತಿದ್ದರು. ಚಿತ್ರಕಲೆಯಲ್ಲಿ ಹಾಸ್ಯವನ್ನು ಮತ್ತು ವ್ಯಂಗ್ಯಭಾವಗಳನ್ನು ಬರೆಯಬಲ್ಲ ಸ್ವಾಮೀಜಿಗಳ ಜಾಣ್ಮೆಯ ಕುರಿತು ಪಿ.ಕೆ. ಪರಮೇಶ್ವರನ್ ನಾಯರ್ ಹೀಗೆ ಕೆಲವು ಮಾತುಗಳನ್ನು ಬರೆದಿದ್ದಾರೆ.

ಸ್ವಾಮಿಗಳು ಕೆ. ಎಂ. ವರ್ಗೀಸ್ ಎಂಬ ಚಿತ್ರಕಲಾವಿದರಲ್ಲಿ ಪಿ. ಮುಕುಂದನ್ ತಂಬಿಯ ಕಲಾ ನೈಪುಣ್ಯತೆಯ ಬಗ್ಗೆ ವಿಚಾರಿಸಿದಂತೆ. ತಂಬಿ ವರ್ಗೀಸರ ಗುರು. ಈ ಕಾಲದಲ್ಲಿ ದೇಶಾದ್ಯಂತ ಹೆಸರು ಪಡೆದ ಕಲಾವಿದನೆಂದರೆ ತಂಬಿ, ಅವರ ಶೈಲಿ ಇನ್ನೊಬ್ಬರಿಂದ ಅನುಕರಿಸಲಾಗದಷ್ಟು ಎತ್ತರ ಬೆಳೆದದ್ದೆಂದು ಸ್ವಾಮೀಜಿ ವಿಮರ್ಶೆಯ ಮಾತನ್ನಾಡಿದರು. ಆಧ್ಯಾತ್ಮ ಹಾಗೂ ದೇವ ದೇವತೆಗಳ ಚಿತ್ರಗಳನ್ನು ತಂಬಿಯ ಹಾಗೆ ಬರೆಯಬೇಕೆಂದು ಅನುಕರಿಸಲು ಪ್ರಯತ್ನಿಸುವವರಿದ್ದಾರೆಂದು ಸಂಭಾಷಣೆಯ ಮಧ್ಯೆ ಹೇಳುತ್ತ, ಅಂತಹ ಅದ್ಭುತ ರಚನೆಗಳ ಹಿಂದೆ ಅಡಗಿರುವ ವರ್ಣವಿನ್ಯಾಸದ ಗುಟ್ಟೇನಿರಬಹುದೆಂದು ವರ್ಗೀಸರಲ್ಲಿ ಪ್ರಶ್ನಿಸಿದರು. ಅದಕ್ಕೆ ವರ್ಗೀಸರು "ಸ್ವಾಮೀಜಿ ನಾನು ಇನ್ನು ಕೂಡಾ ಚಿತ್ರಕಲೆಯ ಅಭ್ಯಾಸ ಕೂಡಾ ಮಾಡಿದವನಲ್ಲ" ಎಂದರು.

ತದನಂತರ ಸ್ವಾಮೀಜಿ ಕೇರಳದ ವಿವಿಧ ದೇವಾಲಯಗಳಲ್ಲಿ ಮುಕುಂದನ್ ತಂಬಿ ಅವರು ಬರೆದ ದೇವೀ ದೇವತೆಗಳ ವಿಭಿನ್ನ ಶೈಲಿಗಳ ಕುರಿತು ಆಳವಾಗಿ ವಿಮರ್ಶಿಸಿದರು. ಅವುಗಳಲ್ಲಿರುವ ವರ್ಣವಿನ್ಯಾಸದ ಮೋಡಿ ಮತ್ತು ಚೈತನ್ಯ ತುಂಬುವ ಬಗೆಗಳ ಕುರಿತು ಮೆಚ್ಚುಗೆಯ ಮಾತಾಡಿದ್ದಲ್ಲದೆ, ಕೋಯಿ ತಂಬುರಾನ್ ಹಾಗೂ ದೇಶಾದ್ಯಂತ ಹೆಸರು ಮಾಡಿದ ಬಂಗಾಳಿ. ಪರ್ಶಿಯನ್ ಚಿತ್ರಕಲೆಗಳು, ಅಜಂತಾ, ಎಲ್ಲೋರಾ ಗುಹೆಗಳ ಭಿತ್ತಿಚಿತ್ರಗಳಲ್ಲಿ ಕಲೆಯ ಸಮ್ಮಿಶ್ರ ಶೈಲಿಗಳಷ್ಟೇ ಆಗಿವೆ ಎಂದು ಮುಂತಾಗಿ ಹೇಳಿದರು. ಇವೆಲ್ಲವುಗಳಿಗಿಂತ ಕೇರಳೀಯ ಚಿತ್ರಕಲೆ ಭಿನ್ನವೂ, ಸ್ವಂತಿಕೆಯುಳ್ಳದ್ದೂ ಆಗಿದೆ ಎಂಬುದು ಸ್ವಾಮೀಜಿಯ ಅಭಿಪ್ರಾಯವಾಗಿತ್ತು. ಅದರಲ್ಲೂ ರವಿವರ್ಮರ ಚಿತ್ರಗಳು ಕೇರಳೀಯ ಸಂಸ್ಕೃತಿಯಿಂದ ಸತ್ವವನ್ನು ಹೀರಿ ಶ್ರೀಮಂತವಾಗಿರುವುದನ್ನು ವಿವರಿಸಿದರಂತೆ.

ಕಲೆಗಳನ್ನು ಪರಸ್ಪರ ಹೋಲಿಸಿ ಸಂಬಂಧ, ಪ್ರಭಾವಗಳನ್ನು ಗುರುತಿಸುವ ಶಕ್ತಿ ಚಟ್ಟಂಬಿ ಸ್ವಾಮಿಗಳಿಗಿತ್ತು. ಪ್ರತಿಯೊಂದು ಅಕ್ಷರಕ್ಕೆ ಆಧಾರಚಕ್ರದಲ್ಲಿ ಎಲ್ಲೆಲ್ಲಿ ಸ್ಥಾನವೆಂದೂ, ಅಕ್ಷರಗಳ ರೂಪ, ಭಾವ, ಗಂಧ, ರುಚಿ ಮತ್ತು ಶಕ್ತಿಗಳೇನೆಂಬುದನ್ನೂ ಅವರು

ಹೇಳಬಲ್ಲವರಾಗಿದ್ದರು. ಯೋಗಶಾಸ್ತ್ರ, ಮಂತ್ರಶಾಸ್ತ್ರ, ವ್ಯಾಕರಣಗಳನ್ನು ಪ್ರಮಾಣಬದ್ಧವಾಗಿ ಕಲಿತದ್ದರಿಂದಲೇ ಅವರಿಗೆ ಈ ಬಗೆಯ ಅಂತರಶಿಸ್ತೀಯ ವಿಮರ್ಶಾ ಜ್ಞಾನ ಸಿದ್ಧಿಸಿರಬೇಕೆನಿಸುತ್ತದೆ.

## ಮಾತೃ ವಿಯೋಗ

ಪರಮ ಭಟ್ಟಾರಕ ಎಂಬ ಹೆಸರು ಜಗದ್ಗುರು ಎನ್ನುವುದರ ಮತ್ತೊಂದು ರೂಪ. ಕುಞ್ಞನ್ ಅಥವಾ ಕುಞ್ಞನ್ ಪಿಳ್ಳೆ ಚಟ್ಟಂಬಿ ಪಟ್ಟಕ್ಕೇರಿ ಷಣ್ಮುಖದಾಸನಾಗಿ ಬೆಳೆದು ವಿದ್ಯಾಧಿರಾಜನೆನಿಸಿ ರಾರಾಜಿಸಿದ ಪರಿ ಈ ತನಕ ಪ್ರಸ್ತುತ. ಮುಂದೆ ಅವರು ಪರಮ ಭಟ್ಟಾರಕ ತೀರ್ಥಪದವಿಗೆ ಏರಿದ ದಾರಿಯನ್ನು ಗಮನಿಸಬೇಕಾಗಿದೆ.

ವಿದೇಶಯಾತ್ರೆಯನ್ನು ಮುಗಿಸಿ ಅನಂತಪುರಕ್ಕೆ ಮರಳಿದ ಸ್ವಾಮೀಜಿ ತನ್ನ ಬಂಧುಗಳ ಮನೆಯಾದ ಕಲ್ಲುಮನೆಯಲ್ಲಿಯೇ ಹೆಚ್ಚಾಗಿ ವಾಸಿಸುತ್ತಿದ್ದರು. ಮನೆ ಯಜಮಾನ ಕೇಶವರಿಗೆ ಆಗ ವಾಮನಪುರಕ್ಕೆ ವರ್ಗವಾದುದರಿಂದ ಸ್ವಾಮಿ ಕೂಡಾ ಅವರೊಂದಿಗೆ ಹೊರಟುಹೋದರು. ಅವರಿಗೊಂದು ವಿಳಾಸ ಎನ್ನುವಂಥಾದ್ದು ಹೆಸರಿಗೆ ಮಾತ್ರ. ಒಂದು ಸ್ಥಳವನ್ನಾಗಲಿ ಮನೆಯನ್ನಾಗಲಿ ಅವರು ಸ್ವಂತದ್ದೆಂದು ಭಾವಿಸಿದವರಲ್ಲ. ಅವರ ಮನಸ್ಸೇ ಹಾಗೆ. ಅದ್ವೈತ ಹಾಗೂ ಅವಧೂತತನದಲ್ಲಿ ಅವರ ನಡೆ ಇತ್ತು. ಇಂಥ ಹೊತ್ತಿಗೆ ಹೋಗಬೇಕು, ಇಷ್ಟರಲ್ಲೆ ಬರಬೇಕು, ಹೀಗೆ ಬದುಕಬೇಕು, ಈ ಬಗೆಯಲ್ಲಿ ವ್ಯವಹರಿಸಬೇಕು, ಹಾಗೇ ಮಾಡಬೇಕು, ಹೀಗಾದರಾದೀತು, ಈಗ ಬಂದದ್ದೆಲ್ಲಿಗೆ, ಇನ್ನೆಲ್ಲಿ ಹೋಗಬೇಕು ಮುಂತಾದ ಲೌಕಿಕ ನಿಬಂಧನೆಗೆ ಒಳಗಾದವರಲ್ಲ. ಯಾವುದಕ್ಕೂ ಅಂಟಿಕೊಳ್ಳದೆ ಅವರು ವಾಮನಪುರದಲ್ಲೂ ಇರತೊಡಗಿದರು. ಕೇಶವ ಪಿಳ್ಳೆಯ ಮನೆಯನ್ನೇ ಕೇಂದ್ರವಾಗಿಟ್ಟು ಅಲ್ಲಿಂದ ಹತ್ತಿರದ ಊರ ಜನರ ಬಳಿಗೆ ಹೋಗಿ ಅಲ್ಲಿ ಇಲ್ಲಿ ಅಲೆಯುತ್ತ ದಿನಗಳೆಯುತ್ತಿದ್ದರು. ಜನವಸತಿ ಇಲ್ಲದಲ್ಲಿ ಅವರು ಒಂಟಿ, ಅಂತರ್ಮುಖಿ.

ಹೀಗೆ ದಿನ ಕಳೆಯುತ್ತ ಒಂದು ದಿನ ಥಟ್ಟನೆ ತನ್ನ ತಾಯಿಯ ಕಾಲ ಸನ್ನಿಹಿತವಾಯಿತೆಂದು ಯೋಗ ದೃಷ್ಟಿಯಿಂದ ಅರಿತರು. ಹುಟ್ಟಿದ ವ್ಯಕ್ತಿಯ ಮೊದಲ ಋಣ ಪಿತೃಗಳಲ್ಲವೆ? ತಂದೆಯಾದರೋ ತೀರ್ಥಯಾತ್ರೆಗೆಂದು ಹೋದವರು ಈತನಕ ಮರಳಿ ಬಂದಿಲ್ಲ. ಎಲ್ಲೋ ಸತ್ತುಹೋಗಿರಬೇಕು. ಇನ್ನು ತಾಯಿಯನ್ನಾದರೂ ಕೊನೆಗಾಲದಲ್ಲಿ ನೋಡಬೇಕಾದ್ದು ತನ್ನ ಕರ್ತವ್ಯವೆಂದು ಅವರಿಗೆ ತೋಚಿದ್ದರಿಂದಲೇ ನೇರವಾಗಿ ತಿರುವನಂತಪುರಕ್ಕೆ ಮರಳಿದರು. ಪುತ್ರನ ಆಗಮನ ಆ ತಾಯಿಗೆ ಸ್ವರ್ಗ ಪ್ರಾಪ್ತಿಗೆ ಸಮಾನವೆನಿಸಿತು. ಶ್ರೀ ಶಂಕರಾಚಾರ್ಯರು ತಮ್ಮ ತಾಯಿಗೆ ಮರಣಶಯ್ಯೆಯಲ್ಲಿ ಶುಶ್ರೂಷೆ ನಡೆಸಿ ಸದ್ಗತಿಗಾಗಿ ನಡೆಸಿದ ಎಲ್ಲ ಕಾರ್ಯಕ್ರಮಗಳನ್ನೂ ಚಟ್ಟಂಬಿ ಸ್ವಾಮೀಜಿಯೂ ಕೈಕೊಂಡರು. ಎಲ್ಲ ಕಳೆದ ಮೇಲೆ ಹುಟ್ಟಿದ ಮನೆಯಿಂದ ಹೊರಟು ಮತ್ತೆ ಪರಿವ್ರಾಜಕನಾಗಿ ಮುನ್ನಡೆದರು.

ನಜ್ಜಮ್ಮ ಪಿಳ್ಳೆ ಧನ್ಯಳೆನಿಸಿದಳು. ಶಿವನ ಅವತಾರವೆನಿಸಿದ ಪುತ್ರನನ್ನು ಪಡೆದ ಅವಳು ಅಂತಹ ಪುಣ್ಯಶಾಲಿಯ ಶುಶ್ರೂಷೆಯಲ್ಲಿಯೇ ಶರೀರವನ್ನು ತೊರೆದಳು, ದಿವ್ಯ ಲೋಕವನ್ನೂ ಹೊಂದಿದಳು.

ತಾಯಿಯ ಅಗಲುವಿಕೆಯೊಂದಿಗೆ ಸ್ವಾಮೀಜಿ ಕೊನೆಯ ಲೌಕಿಕ ಸಂಬಂಧದಿಂದಲೂ ಬೇರ್ಪಟ್ಟಂತಾಯಿತು. ಹಿಂದಕ್ಕೆಳೆಯಬಲ್ಲ ಸಂಸಾರಪಾಶ ಇನ್ನಿಲ್ಲ. ಮುಂದಕ್ಕೆ ಅಡಿಯಿಡುವ ಧಾವಂತದಿಂದ ಅಶಾಂತತೆ ಮನೆಮಾಡಿತು. ಅವರು ಕಲಿಯದೆ ಬಿಟ್ಟ ವಿದ್ಯೆ ಯಾವುದಿದೆ? ಇಂತಹ ವಿದ್ವಾಂಸರು ವಿದ್ಯೆಯ ಮದ ಹೊಕ್ಕರೆ ದಾರಿ ತಪ್ಪುವ ಸಾಧ್ಯತೆಯೇ ಹೆಚ್ಚು. ಆದರೆ ಸ್ವಾಮೀಜಿಗೆ ತನ್ನ ಜ್ಞಾನದಲ್ಲಿ ಇರಬಹುದಾದ ಕುಂದೇ ಮುಖ್ಯವೆನಿಸಿತ್ತು. ಯೋಗ ಸಮಾಧಿಯ ನಿರ್ವಿಕಲ್ಪ ಸ್ಥಿತಿಯಲ್ಲಿ ಅವ್ಯಾಹತ ಆನಂದ ಸಿಗುತ್ತಿದೆಯಾದರೂ ಅದರಿಂದ ಬಿಡಿಸಿಕೊಂಡು ಕಣ್ಣು ತೆರೆದರೆ ಅದ್ವೈತದ ಚಿತ್ರ ಅಳಿದುಹೋಗಿ ದ್ವೈತ ಮೂಡಿ ಬರುತ್ತಿತ್ತು. ಕಣ್ಣು ಮುಚ್ಚಿದರೂ ತೆರೆದರೂ ಚಿದಾನಂದದಲ್ಲಿ ಅಖಂಡ ಅನುಭವವಾಗಬೇಕು. ಇನ್ನೂ ಅದು ತನಗೆ ಸಿದ್ಧಿಸಿಲ್ಲವೆಂಬ ನೋವು ಕುಟುಕತೊಡಗಿತು. ಈ ಕುರಿತು ಅವರು ಅನೇಕ ಯೋಗಿಗಳಲ್ಲಿ ಮತ್ತು ಪಂಡಿತರಲ್ಲಿ ಹೇಳಿಕೊಂಡರು. ಉತ್ತರ ಸಿಗದಾದಾಗ ಅಂತಹ 'ಏಕಮೂಲಿಕೆ'ಗಾಗಿ ಮರುತ್ವಾಮಲೆ, ತಿರುವಿದಾಂಕೂರುಗಳಲ್ಲಿ ಅಲೆದಾಡಿ ನೋಡಿದರು. ಹಾಗೇ ದಿನಗಳು ಉರುಳಿದವು.

## ಪರಮ ಭಟ್ಟಾರಕ

ದಕ್ಷಿಣ ತಿರುವಾಂಕೂರಿನಲ್ಲಿ ವಡಿವೀಶ್ವರ ಎಂಬ ಗ್ರಾಮವೊಂದಿದೆ. ಅಲ್ಲಿ ಅವರಿಗೆ ಹುಡುಕುತ್ತಿದ್ದ ಬಳ್ಳಿ ಕಾಲಿಗೆ ತೊಡರಿದಂತಾಯಿತು. ಆ ಘಟನೆಯೊಂದು ರೋಚಕ ಅನುಭವ.

ವಡಿವೀಶ್ವರದ ಶ್ರೀಮಂತರೊಬ್ಬರ ಮನೆಯಲ್ಲಿ ವೈಭವದ ಭೋಜನ ನಡೆಯುತ್ತಿತ್ತು. ಹೊರಗೆ ಎಂಜಲೆಲೆಗಳ ರಾಶಿ. ಆದಿಮಾನವನಂಥ ವ್ಯಕ್ತಿಯೊಬ್ಬ ಆ ರಾಶಿಯನ್ನು ಕೆದಕಿ ಎಂಜಲನ್ನು ಆಯುತ್ತಿದ್ದ. ಪಾಲಿಗಾಗಿ ಒಂದು ನಾಯಿ ಕೂಡಾ ಸ್ಪರ್ಧಿಸಿತ್ತು. ಇದನ್ನೆಲ್ಲ ಕುತೂಹಲದಿಂದ ನೋಡುತ್ತಿದ್ದ ಮಕ್ಕಳು ಕೇಕೆ ಹಾಕಿ ನಗುತ್ತಿದ್ದರು. ಇದಕ್ಕೆಲ್ಲ ಸಾಕ್ಷಿಯಾದಂತೆ ಅನತಿದೂರದಲ್ಲಿ ಚಟ್ಟಂಬಿ ಕುಞ್ಞನ್ ಪಿಳ್ಳೆ ನಿಂತಿದ್ದಾರೆ. ಆ ಸಾಧು ಮನುಷ್ಯ ಅಪ್ರತಿಮ ಅವಧೂತನಿರಲೇ ಬೇಕೆಂದು ಅವರು ಊಹಿಸಿದರು. ಮಹಾತ್ಮನನ್ನು ಇನ್ನೊಬ್ಬ ಮಹಾತ್ಮನಿಂದ ಮಾತ್ರ ಗುರುತಿಸಲು ಸಾಧ್ಯ ತಾನೆ!

ಸ್ವಲ್ಪವೇ ಹೊತ್ತು ಕಳೆದು ಆ ಅರೆನಗ್ನ ಸನ್ಯಾಸಿಯಂಥ ವ್ಯಕ್ತಿ ಲಗುಬಗೆಯಿಂದ ಎದ್ದು ನಡೆಯತೊಡಗಿದ. ಕುಞ್ಞನ್ ಪಿಳ್ಳೆಯೂ ಅವನನ್ನು ಹಿಂಬಾಲಿಸಿದರು. ನಡೆನಡೆದು ಅವರೊಂದು ಬೆಟ್ಟದ ತಪ್ಪಲಿಗೆ ತಲುಪಿದ್ದರು. ಆ ವ್ಯಕ್ತಿ ಒಮ್ಮೆ ಹಿಂತಿರುಗಿ ನೋಡಿದ. ಚಟ್ಟಂಬಿ ಭಕ್ತಿಪುರಸ್ಸರರಾಗಿ ವಂದಿಸಿದರು. ಆತ ಚಟ್ಟಂಬಿಯನ್ನು ಬಳಸಿ ಹಿಡಿದು ಏನೋ ಉಪದೇಶ

ನೀಡಿದ. ಹಿಂದೆಂದೂ ಅನುಭವವಾಗದ ಪುಳಕದಲ್ಲಿ ಚಟ್ಟಂಬಿ ಸ್ವಾಮಿ ಒಮ್ಮೆಗೇ ಮೈಮರೆತರು. ತಕ್ಷಣ ಆತ ಬೆಟ್ಟದ ಇರುಕಲಿನಲ್ಲಿ ಕಾಣದಾದ. ಕಾಡಿನೊಳಗೆ ಧಾವಿಸಿದ ಚಟ್ಟಂಬಿ ಹೊರಗಿಳಿದಾಗ ಚಟ್ಟಂಬಿ ಸ್ವಾಮಿಗಳಾಗಿ ಪರಿವರ್ತಿತರಾಗಿದ್ದರು. ಪರಮಭಟ್ಟಾರಕತನದ ಸೀಮೆಗೆ ಹೀಗೆ ಅವರ ಸಂಕ್ರಮಣವಾಯಿತು.

ಕಾಡಿನೊಳಗೆ ಅವಧೂತನೊಂದಿಗೆ ಆದ ಮಿಲನ, ಮುಂದಿನ ಘಟನೆಗಳು ಹೇಗಿದ್ದವೆಂಬುದು ಅವರಿಬ್ಬರಿಗೆ ಮಾತ್ರ ತಿಳಿದಿರಬಹುದಾದ ರಹಸ್ಯ. ವಿವಿಧ ಕೃತಿಕಾರರು ಇದನ್ನು ಚಮತ್ಕಾರಿಕವಾಗಿ ವರ್ಣಿಸಿದ್ದಾರೆ. ಆದರೆ ನಂತರದ ಪರಿಣಾಮ ಇಲ್ಲಿ ಮುಖ್ಯ. ಚಟ್ಟಂಬಿಯವರನ್ನು ಕಾಡುತ್ತಿದ್ದ ಪ್ರಶ್ನೆಗೆ ಅಂದು ಉತ್ತರ ಸಿಕ್ಕಿತು. ಅವರು ಜ್ಞಾನಿಯೆನಿಸಿದರು, ಬ್ರಹ್ಮಜ್ಞಾನ ದೀಕ್ಷೆ ಹೊಂದಿದರು. ಆ ಅವಧೂತನನ್ನು ಅಗಸ್ತ್ಯ, ಅಶ್ವತ್ಥಾಮ, ಸುಬ್ರಹ್ಮಣ್ಯನೆಂದು ಮುಂತಾಗಿ ಬೇರೆ ಬೇರೆ ಬರಹಗಾರರು ಕಂಡರಿಸಿದ್ದಾರೆ.

ಎಂತಿದ್ದರೂ ಈ ಕ್ಷಣದಿಂದ ಕೇರಳದ ಪಾಲಿಗೆ ಒಬ್ಬ ಪ್ರತ್ಯಗ್ರ ಶಂಕರನ ಉದಯವಾಯಿತು. ಸಾಮಾಜಿಕ, ಸಾಂಸ್ಕೃತಿಕ ರಂಗದ ನವೋತ್ಥಾನಕ್ಕಾಗಿ ಹರಿಕಾರನೊಬ್ಬ ಸಿದ್ಧಗೊಂಡರು. ಹಾಗಾಗಿ ಚಟ್ಟಂಬಿ ಸ್ವಾಮಿಗಳ ಮುಂದಿನ ಚರಿತ್ರೆ ಕೇರಳದ ಸಾಮಾಜಿಕ – ಸಾಂಸ್ಕೃತಿಕ – ಆಧ್ಯಾತ್ಮಿಕ ಚರಿತ್ರೆಯಾಗುತ್ತದೆ.

ಅವರನ್ನು ಜನರು ಅಸಾಮಾನ್ಯ ವ್ಯಕ್ತಿಯಾಗಿ ಕಂಡರು. ಅವರ ಅಲೆದಾಟವೂ ನಿಗೂಢ ಸಮಾಧಿಯಂತಿತ್ತು. ಪ್ರಪಂಚವನ್ನೂ ಅದರ ಚರ್ಯೆಯನ್ನೂ ಅವರು ದೈವಲೀಲೆಯಾಗಿ ನೋಡಿದರು. ಬಿಳಿ ಬಟ್ಟೆ ಮತ್ತು ಬಿಳಿಯ ಮೇಲ್ವಸ್ತ್ರ ತೊಟ್ಟ ಅವರು ಜ್ಞಾನವನ್ನು ಸನ್ಯಾಸದ ಲಕ್ಷಣವೆಂದು ಬಗೆದರು. ಕೇಶವ ಪಿಳ್ಳೆಯಲ್ಲಿ ವಾಸ ಹೆಸರಿಗೆ ಮಾತ್ರ. ಬಾಧೆಗಳ ನಿವಾರಣೆ, ಮರಣಾಸನ್ನ ರೋಗಿಗಳನ್ನು ಕೂಡಾ ಗಿಡಮೂಲಿಕೆಗಳ ಪ್ರಯೋಗದಿಂದ ರಕ್ಷಿಸುವುದು, ವಿಷಬಾಧೆಗೆ ಚಿಕಿತ್ಸೆ ನೀಡುವುದು, ಗೃಹಸ್ಥ ಧರ್ಮದ ಮಹಿಮೆಯನ್ನು ತಿಳಿಹೇಳಿ ಜನರನ್ನು ಒಳ್ಳೆಯ ಗೃಹಸ್ಥರಾಗುವಂತೆ ಬೋಧಿಸುವುದು, ಇಡೀ ಮಾನವ ರಾಶಿಯನ್ನು ಒಂದೇ ಕುಟುಂಬವೆಂದು ಪ್ರಚುರ ಮಾಡುವುದು, ಎಲ್ಲ ಪ್ರಾಣಿಗಳ ಮೇಲೂ ಪ್ರೀತಿ ವಾತ್ಸಲ್ಯಗಳ ಕರುಣಾ ಪ್ರವಾಹ ಹರಿಯುವಂತೆ ಬೋಧಿಸುವುದು, ಮನೋಧರ್ಮ ತಿದ್ದಿ ಕರ್ಮನಿರತರಾಗುವಂತೆ ಪ್ರೇರೇಪಿಸುವುದು, ಧನಿಕ–ದರಿದ್ರ, ನಾಯಕ –ಶ್ರೀಸಾಮಾನ್ಯರನ್ನೆಲ್ಲ ಸಮಾನರಾಗಿ ಕಾಣುವುದು – ಹೀಗೆ ತನ್ನ ಬದುಕಿನ ಗುರಿ ಸಾಧನೆಯ ಈಡೇರಿಕೆಗಾಗಿ ಅವಿರತ ಶ್ರಮಿಸುವುದೇ ಅವರ ದಿನಚರಿಯಾಗಿ ಹೋಯಿತು. ಕೆಲಸ ಚಿಕ್ಕದಾಗಿರಲಿ ಮಹತ್ವದ್ದಾಗಿರಲಿ ಅದರಲ್ಲಿ ಪೂರ್ಣವಾಗಿ ತೊಡಗಿಸಿಕೊಳ್ಳುವ ಪ್ರಾಮಾಣಿಕ ನಡೆ ಅವರ ವ್ಯಕ್ತಿತ್ವಕ್ಕೆ ಕಳಸಪ್ರಾಯವೆನಿಸಿತು. ನಿಸ್ಪೃಹತೆಯಲ್ಲೂ ಅವರು ಗಟ್ಟಿಗನೆ. ಕೆಲವೊಮ್ಮೆ ಇದ್ದಕ್ಕಿದ್ದಂತೆ ವಿಂಧ್ಯಾದ್ರಿ, ಅಗಸ್ತ್ಯಕೂಟ ಮುಂತಾದೆಡೆ ನಡೆದು ಗುಹೆಗಳಲ್ಲಿ ವಿಶ್ರಮಿಸುತ್ತಲೂ ಇದ್ದರು.

ಕೈ ನೀಡಿರೆ ದಡಕೇರದ ಪತಿತರು ಇಹರೆ?

ಜನರಿರೆ ಕೆಸರಲಿ ನಗುವುದು ಸರಿಯೆ?

ತಾನೊಬ್ಬನೆ ಸಾಯುಜ್ಯವ ಬಯಸುವ ನಡೆ

ತರುವುದೆ ಸುಖ ಪಾತ್ರತೆ ತಾಪಸಗೆ?

ಎಂಬಂತೆ ನಡಕೊಂಡ ಅವರ ಕ್ರಿಯಾಶೀಲತೆ ಸಮಾಜಕ್ಕೇ ಮಾದರಿಯೆನಿಸಿತು. ಸೇವಾರಂಗದಲ್ಲಿ ಅವರು ದ್ವಂದ್ವಾತೀತರೆನಿಸಿದರು. ಸಮಾಜದ ಸುಖ ಶಾಂತಿ – ಉನ್ನತಿಗಳನ್ನೇ ನಿರೀಕ್ಷಿಸಿ ಹೆಜ್ಜೆ ಮುಂದಿಡುತ್ತ ಹೋದರು.

ಮುಂದೆ ವಿವೇಕಾನಂದರೊಂದಿಗೆ ಸಂವಾದ; ವೈಶಿಷ್ಟ್ಯಪೂರ್ಣ ಕೃತಿಗಳ ರಚನೆ, ಷಷ್ಠಿಪೂರ್ತಿ ಆಚರಣೆ, ಮಹಾ ಸಮಾಧಿಗೆ ಸಂದದ್ದು – ಹೀಗೆ ಎಲ್ಲ ಸಂದರ್ಭಗಳಲ್ಲೂ ಅವರ ಕೀರ್ತಿಗೆ ಪುಟವಿಟ್ಟಂತಾಯಿತು.

ಚಟ್ಟಂಬಿ ಸ್ವಾಮಿ ಎಲ್ಲಿ ಯಾವಾಗ ಯಾವ ಸಾಧನೆಗಳಲ್ಲಿ ನಿರತರಾದರೆಂಬುದನ್ನು ದಾಖಲಿಸುವುದಕ್ಕೆ ಸಾಧ್ಯವಿಲ್ಲದಷ್ಟು ನಿಗೂಢ ಸಂಚಾರಿಯಾಗಿದ್ದರು. ಈ ವಿಷಯದಲ್ಲಿ ಅವರನ್ನು ಹಿಂಬಾಲಿಸಿ ದಾಖಲಿಸುವವರಿರಲಿಲ್ಲ. ಎಲ್ಲೂ ಅವರು ಅಭಿನಂದನೆ, ಪ್ರೋತ್ಸಾಹಗಳಿಗೆ ಮನಸೋತವರಲ್ಲ. ಇದರಿಂದಾಗಿ ಅಭಿಮಾನಿಗಳು ಅವರ ಸಾಧನೆಗಳ ಮತ್ತು ವ್ಯಕ್ತಿತ್ವದ ಬಗ್ಗೆ ಸಂಪೂರ್ಣವಾಗಿ ತಿಳಿಯಲಾಗದೆ ಹೋದರೆನ್ನಬಹುದು.

ಹಿಮಾಲಯವನ್ನೂ ಸಮುದ್ರವನ್ನೂ ನಾವು ನೋಡುತ್ತೇವೆ. ಆದರೆ ಅವುಗಳ ಅಗಾಧತೆಯನ್ನು ಪೂರ್ಣ ಕಾಣಲಾಗದ ಮೌಢ್ಯವೂ ನಮ್ಮದೇ. ಸ್ವಾಮೀಜಿಗಳ ವಿಷಯದಲ್ಲೂ ಅಷ್ಟೆ. ಅವರ ಸಮಕಾಲೀನರ ಅನುಭವ ಹಾಗೂ ನೆನಪುಗಳ ಮೆಲುಕಿನಿಂದಷ್ಟೇ ಅವರ ಅರ್ಥೈಸುವಿಕೆ ಸಾಧ್ಯವಾಗುತ್ತದೆ.

## ಶಿಷ್ಯತ್ರಯ

ಕಾತೇ ಕಾಂತಾ ಕಸ್ತೇ ಪುತ್ರ: ಸಂಸಾರೇವಮತೀಯ ವಿಚಿತ್ರ: ಎಂದು ಸಾರಿದ ಶಂಕರಾಚಾರ್ಯರೇ ಬೇರೆ, ಚಟ್ಟಂಬಿ ಸ್ವಾಮಿಯೇ ಬೇರೆ. ಇವರು ಒಮ್ಮೆಯೂ ಗೃಹಸ್ಥಾಶ್ರಮವನ್ನು ಲಘುವೆಂದು ಭಾವಿಸಲಿಲ್ಲ. ಗೃಹಸ್ಥನಿಗೆ ಮೋಕ್ಷ ಹೇಗೆ ಸ್ವಭಾವ ಸಹಜ ಎನ್ನುವುದನ್ನು ಪ್ರತಿಪಾದಿಸಿ ಅಚ್ಚರಿ ಮೂಡಿಸಿದರು. ತನ್ನ ಶಿಷ್ಯರಲ್ಲಿ ಯೋಗ ಚಿಂತನೆಗಿಂತ ಜೀವನ ಶುದ್ಧಿಯೇ ಶ್ರೇಷ್ಠವೆಂದು ಸಾರಿದರು. ಹಾಗಾಗಿ ಚಟ್ಟಂಬಿ ಸ್ವಾಮಿಗಳಿಗೆ ಶಿಷ್ಯರಾದವರಲ್ಲಿ ಹೆಚ್ಚಿನವರೂ ಗೃಹಸ್ಥರು. ಸನ್ಯಾಸಕ್ಕೆ ಅರ್ಹರಾದವರನ್ನು ಅವರು ಒಂದೇ ನೋಟದಿಂದ ತಿಳಿಯುತ್ತಿದ್ದರು. ಲಕ್ಷಾಂತರ ಕೇರಳೀಯರ ನಡುವೆ ಮೂವರಿಗೆ ಮಾತ್ರ ಜ್ಞಾನದೀಕ್ಷೆ ನೀಡಿ ಆಶೀರ್ವದಿಸಿದರು. ಆ ಮೂವರೆಂದರೆ ಶ್ರೀ

ನಾರಾಯಣ ಗುರುದೇವರು, ನೀಲಕಂಠ ತೀರ್ಥಪಾದರು ಮತ್ತು ಶ್ರೀ ತೀರ್ಥಪಾದ ಪರಮಹಂಸರು.

ಚಟ್ಟಂಬಿ ಸ್ವಾಮಿಗಳು ವಾಮನಪುರದಲ್ಲಿ ಸಂಚಾರದಲ್ಲಿದ್ದ ವೇಳೆ ಅವರ ಗೃಹಸ್ಥ ಶಿಷ್ಯರೊಬ್ಬರು ಸ್ವಾಮಿ ದರ್ಶನಾಕಾಂಕ್ಷಿಯೊಬ್ಬನನ್ನು ಕರೆದು ತಂದಿದ್ದರು. ಅವರ ಹೆಸರು ನಾಣು ಆಶಾನ್. ನಾಣು ಆಗ ಸನ್ಯಾಸ ದೀಕ್ಷೆಯಲ್ಲಿದ್ದರಾದರೂ ಮಾನಸಿಕ ದೃಢತೆ ಹೊಂದಿರಲಿಲ್ಲ. ಅಂತೂ ಈ ಭೇಟಿ ನಾಡಿನ ಭವಿಷ್ಯದ ಭಾಗ್ಯೋದಯಕ್ಕೆ ನಾಂದಿಯಾಯಿತು. ಅವರ ಮೊದಲ ಮಿಲನವೇ ಗಾಢ ಪರಿಚಯಕ್ಕೆ ದಾರಿ ಮಾಡಿಕೊಟ್ಟಿತು. ಚಟ್ಟಂಬಿ ಸ್ವಾಮಿಗಳು ಅವರಿಗೆ ಬಾಲಸುಬ್ರಹ್ಮಣ್ಯ ಮಂತ್ರವನ್ನೇ ಉಪದೇಶಿಸಿದರು. ಮುಂದೆ ಈ ನಾರಾಯಣ ಗುರು ಚಟ್ಟಂಬಿಯವರ ಆತ್ಮೀಯ ಒಡನಾಡಿಯೆನಿಸಿಕೊಂಡರು.

ಕ್ರಮೇಣ ಕೇಶವ ಪಿಳ್ಳೆಗೆ ಏಟ್ಟುಮಾನೂರಿಗೆ ವರ್ಗವಾಯಿತು. ಅದರಿಂದಾಗಿ ಮುಂದೆ ಸ್ವಾಮಿ ತಿರುವಡಿಗಳು ಏಟ್ಟುಮಾನೂರು, ಮೂವಾಟ್ಟುಪುಳ ಮುಂತಾದ ಪ್ರದೇಶಗಳಲ್ಲಿ ಸಂಚರಿಸುವಂತಾಯಿತು. ಎರಡನೇ ಸನ್ಯಾಸಿ ಶಿಷ್ಯನಾಗಿ ನೀಲಕಂಠ ತೀರ್ಥಪಾದರು ಶ್ರೀಗಳಿಗೆ ಈ ಪ್ರದೇಶದಲ್ಲಿ ಲಭಿಸಿದರು.

ನೀಲಕಂಠರು 1871 ರಲ್ಲಿ ಮೂವಾಟ್ಟುಪುಳ ತಾಲ್ಲೂಕಿನ ಶ್ರೀ ಮಧುಶೇಖರ ಎಂಬ ವಿಷ್ಣು ದೇವಾಲಯದ ಹತ್ತಿರದ ಮಾರಾಡಿ ಎಂಬಲ್ಲಿ ಜನಿಸಿದರು. ಈ ಗುರು ಶಿಷ್ಯರಿಗೆ ಹದಿನೆಂಟೇ ವರ್ಷಗಳ ಅಂತರವಿತ್ತು. ಸ್ವಾಮಿ ತಿರುವಡಿಗಳ ಕುರಿತು ಹಿಂದೆಯೇ ಕೇಳಿದ್ದ ನೀಲಕಂಠರು ತನ್ನ ಆಸಕ್ತಿಯ ವಿಷಯವಾದ ವಿಷ ವೈದ್ಯದ ಕುರಿತು ಹೆಚ್ಚಿನ ಜ್ಞಾನ ಸಂಪಾದನೆಗಾಗಿಯೇ ಭೇಟಿಯಾಗಿದ್ದರು.

ಪುಟ್ಟ ನೀಲಕಂಠ ಪಿಳ್ಳೆ ಕಲಿಯಬೇಕಾಗಿರುವುದು ಸಂಸಾರ ವಿಷ ವೈದ್ಯವಲ್ಲದೆ ಮತ್ತೊಂದಲ್ಲ ಎಂದು ಚಟ್ಟಂಬಿ ಸ್ವಾಮಿ ಸಲಹೆ ಮಾಡಿದರು. ಹಾಗೆ ಅವರಿಗೆ ಎರಡನೇ ಶಿಷ್ಯ ಪ್ರಾಪ್ತಿಯಾಯಿತು. ಈ ನೀಲಕಂಠನೇ ಮುಂದೆ ನೀಲಕಂಠ ತೀರ್ಥಪಾದರೆನಿಸಿದರು.

ಯೋಗ ವೇದಾಂತಾದಿ ಶಾಸ್ತ್ರಗಳಲ್ಲೂ ಕಾವ್ಯಶಾಸ್ತ್ರಾದಿ ನೈಪುಣ್ಯದಲ್ಲೂ ಅವರಂತೆ ಕೆಲವರೇ ಇದ್ದರು. ಉತ್ತರ ಭಾರತ ಹಾಗೂ ಜರ್ಮನಿಯಂತಹ ಪರರಾಷ್ಟ್ರಗಳ ಜ್ಞಾನ ಕುತೂಹಲಿಗಳು ಇವರ ವಿದ್ವತ್ತನ್ನು ಮುಕ್ತಕಂಠದಿಂದ ಕೊಂಡಾಡಿದ್ದಾರೆ. ಇವರು ಚಟ್ಟಂಬಿ ಸ್ವಾಮಿಗಳ ಮುಂದೆ ವಿಧೇಯ ಶಿಷ್ಯನಾಗಿ ಮುಗ್ಧ ಬಾಲಕನಂತಿರುತ್ತಿದ್ದರು. ಗುರುವಿನ ಸಮ್ಮುಖದಲ್ಲೇ ಮಹಾ ಸಮಾಧಿಗೂ ಸಂದರು.

ವಯಸ್ಸಿನಲ್ಲಿ 28 ವರ್ಷಗಳ ಅಂತರವುಳ್ಳ ನಾರಾಯಣ ಕುರುಪ್ಪ್ ಬಡಗು ಪರವೂರಿನ ವಡಕ್ಕೇಶ್ವರ ಮಠದವರು. ಈತನನ್ನು ಗುರು ಪುತ್ರ ವಾತ್ಸಲ್ಯದಿಂದ ನೋಡುತ್ತಿದ್ದರು. ಮುಂದೆ ಶ್ರೀ ತೀರ್ಥ ಪರಮಹಂಸನೆಂಬ ಹೆಸರಲ್ಲಿ ಖ್ಯಾತರಾದ ಈ ಸ್ವಾಮೀಜಿ ತನ್ನ ಗುರುವಿನ

ಷಷ್ಠ್ಯಬ್ದ ಕಾರ್ಯಕ್ರಮದಲ್ಲಿಯೂ ಚೆನ್ನಾಗಿ ದುಡಿದಿದ್ದರು. ಅವರು ಗುರೂಪದೇಶದಂತೆ ಸಮಾಜ ಸೇವೆಯಲ್ಲಿಯೇ ಸಂದವರು. ಗುರುವಿನ ಆದರ್ಶವನ್ನು ಪ್ರಚಾರ ಮಾಡುವುದಕ್ಕಾಗಿಯೇ ಅವರ ಹೆಸರಲ್ಲಿ ಏಳೂಮಟ್ಟೂರಿನಲ್ಲಿ ಆಶ್ರಮವೊಂದನ್ನು ಸ್ಥಾಪಿಸಿದರು. ಪ್ರಬಂಧಗಳ ರಚನೆ ಮತ್ತು ಭಾಷಣಗಳ ಮೂಲಕ ಆ ಕಾಲದಲ್ಲಿ ಭಾಷಾ ಸೇವೆ ಮಾಡಿದವರಲ್ಲಿ ಅದ್ವಿತೀಯರೆನಿಸಿದರು. ಅವರ ಲೇಖನ, ಭಾಷಣಗಳನ್ನು ಆಂಗ್ಲ ಭಾಷೆಗೆ ಅನುವಾದಿಸಿದರೆ ಬಹುಶ: ಇನ್ನೊಬ್ಬ ವಿವೇಕಾನಂದರನ್ನು ಕಂಡು ಕೊಳ್ಳಬಹುದೆಂಬ ಪ್ರತೀತಿ ಇದೆ. ಈ ಕೊನೆಯ ಇಬ್ಬರು ಶಿಷ್ಯರು ಚಟ್ಟಂಬಿಯವರನ್ನು ಪರಮಭಟ್ಟಾರಕ ಪದವಿಯಲ್ಲಿಟ್ಟು ಕೊಂಡಾಡಿದರೆನ್ನಬಹುದು.

## ವಿವೇಕಾನಂದರೊಂದಿಗೆ

ಇಂಗ್ಲೀಷರ ಆಧಿಪತ್ಯ, ಪಾಶ್ಚಾತ್ಯೀಕರಣದ ಚಾಪಲ್ಯ, ಮತಾಂತರದ ಕೋಲಾಹಲ ಹಾಗೂ ಅದರಿಂದ ಉಂಟಾದ ಉಚ್ಚ ನೀಚ ಭೇದ ಹಾಗೂ ಅಸ್ಪೃಶ್ಯತೆ – ಅಜ್ಞಾನಗಳು, ಪ್ರತಿಭಟಿಸುವುದಕ್ಕಾಗದ ಹೇಡಿತನ, ಉದಾಸೀನತೆಗಳು ತುಂಬಿದ್ದ ಕಾಲಘಟ್ಟದಲ್ಲಿ ಕೇರಳೀಯರ ಉದ್ಧಾರಕ್ಕಾಗಿ ಚಟ್ಟಂಬಿ ಸ್ವಾಮಿಗಳು ಶಕ್ತಿ ಮೀರಿ ಹೋರಾಡುತ್ತ ಬಂದರು. ಅದೇ ವೇಳೆ ಉತ್ತರಭಾರತದಲ್ಲಿ ಶ್ರೀ ರಾಮಕೃಷ್ಣಪರಮಹಂಸರು ಪ್ರಖ್ಯಾತರಾಗಿದ್ದರು. ಅವರ ಜೀವನ ಸಂದೇಶಗಳನ್ನು ಶಿರಸಾವಹಿಸಿಕೊಂಡು ದೇಶ ವಿದೇಶ ಸುತ್ತಿದವರು ಶ್ರೀ ವಿವೇಕಾನಂದರು. ಅವರು ದೇಶ ಪರ್ಯಟನೆಯ ವೇಳೆ ಕೇರಳಕ್ಕೂ ಕಾಲಿಟ್ಟರು. 1892 ರಲ್ಲಿ ಅವರು ಎರ್ನಾಕುಳಕ್ಕೂ ತಲುಪಿದರು. ದಿವಾನ್ ಸೆಕ್ರೆಟರಿಗಳ ಅತಿಥಿಯಾಗಿದ್ದ ತಿರುವಡಿಗಳು ವಿವೇಕಾನಂದರನ್ನು ಕಾಣುವ ಸಂದರ್ಭ ಒದಗಿಬಂತು.

ಎರ್ನಾಕುಳಂನಲ್ಲಿ ಬೋಟಿನಿಂದ ಇಳಿದು ಬಂದ ಆ ತೇಜಸ್ವಿಯನ್ನು ಸ್ವಾಗತಿಸಿದ ಭಾಗ್ಯಶಾಲಿಗಳು ಶ್ರೀ ರಾಮಯ್ಯರ್ ಹಾಗೂ ಚಂದುಲಾಲರು. ವಿವೇಕಾನಂದರ ಆಂಗ್ಲಭಾಷಾ ಜ್ಞಾನ ಆ ಉನ್ನತ ಅಧಿಕಾರಿಗಳನ್ನು ದಂಗುಬಡಿಸಿತು. ವಂಗ ಸನ್ಯಾಸಿಗೆ ಅವರು ಕೇರಳ ಸನ್ಯಾಸಿಯನ್ನು ಪರಿಚಯಿಸಿದರು. ಇವರಿಬ್ಬರೂ ಸಂಸ್ಕೃತ ಭಾಷೆಯಲ್ಲಿಯೇ ಸಂವಾದ ನಡೆಸಿದರು. ಸಂದರ್ಭ ನೋಡಿ ಇಬ್ಬರೂ ಒಂದೆಡೆ ಸೇರಿ ಗಂಟೆಗಟ್ಟಲೆ ಮಾತುಕತೆಯಾಡಿದರು. ಶ್ರೀ ವಿವೇಕಾನಂದರಿಗೆ ಅನೇಕ ದಿನಗಳಿಂದ ಉತ್ತರ ದೊರಕದ ಸಮಸ್ಯೆಯೊಂದಿತ್ತು. ಚಿನ್ಮುದ್ರೆಗೆ ಸಂಬಂಧಿಸಿದ ಆ ಸಮಸ್ಯಾಪೂರಣವನ್ನು ತಿರುವಡಿಗಳು ಬೃಹದಾರಣ್ಯಕೋಪನಿಷತ್ತಿನ ಇನ್ನೂ ಪ್ರಚಾರಗೊಳ್ಳದ ಭಾಗವೊಂದರ ಪರಾಮರ್ಶನ – ವಿಶ್ಲೇಷಣೆಗಳ ಮೂಲಕ ಮಾಡಿಕೊಟ್ಟರು. ಅಂತೂ ಅತಿಥಿಯ ಅನೇಕ ಸಂದೇಹಗಳಿಗೆ ಪರಿಹಾರ ನೀಡಿದ ಕೀರ್ತಿ ಚಟ್ಟಂಬಿ ಸ್ವಾಮಿ ತಿರುವಡಿಗಳಿಗೆ ದಕ್ಕಿತು.

ಅದೇ ಸಂದರ್ಭದಲ್ಲಿ ವಿವೇಕಾನಂದರು ಹೀಗೆ ಪ್ರತಿಕ್ರಿಯಿಸಿದರಂತೆ – "ನಾನು ಬಂಗಾಳದಿಂದ ತುಂಬ ದೂರ ಸಂಚರಿಸಿದೆ. ಉತ್ತರದಿಂದ ದಕ್ಷಿಣ ತುದಿಗೆ ಹತ್ತಿರವಾದೆ.

ಕೆಲವು ಮಂದಿ ಸನ್ಯಾಸಿಗಳನ್ನು ಕಂಡೆ. ಚಿನ್ಮುದ್ರೆಯ ಕುರಿತು ಅರ್ಥವಾಗುವಂತೆ ಈ ತನಕ ಯಾರೂ ಹೀಗೆ ತಿಳಿಸಿದವರಿಲ್ಲ." ಕೇರಳದ ಸಾಮಾಜಿಕ ಸುಧಾರಣೆಗಾಗಿ ತಿರುವಡಿಗಳು ಕೈಗೊಂಡ ಕಾರ್ಯಕ್ರಮಗಳನ್ನೆಲ್ಲ ಪರಾಮರ್ಶಿಸಿದ ವಿವೇಕಾನಂದರು ತನ್ನ ದಿನಚರಿ ಪುಸ್ತಕದಲ್ಲಿ ಈ ಮಾತನ್ನೂ ಉಲ್ಲೇಖಿಸಿದರು –

"Here I have seen a remarkable person"

"ಆ ಚಿನ್ನದ ಕೊಡ ಬಾಯಿ ತೆರೆದರೆ ಮಳಲ ಕಣವೂ ಸಿಹಿಯಾದೀತು" ಎಂದು ವಿವೇಕಾನಂದರ ಬಗ್ಗೆ ತಿರುವಡಿಗಳೂ ಉಲ್ಲೇಖಿಸಿದ್ದಾರೆ. 'ಒಂಬತ್ತೂ ಲಕ್ಷಣಗಳು ಒಟ್ಟು ಸೇರಿದ ಕಣ್ಣುಗಳು ಅವರವು' ಎಂದೂ ಪ್ರಸ್ತಾಪಿಸಿದ್ದಾರೆ.

1894 ರ ಕಾಲದಲ್ಲಿ ತಿರುವಡಿಗಳು ರೋಗ ಬಾಧಿತರಾಗಿ ಊರೊಳಗಿನ ಸಾದಾ ಆಸ್ಪತ್ರೆಗೆ ಸೇರಬೇಕಾಯಿತು. ಉಟ್ಟ ಬಟ್ಟೆಗೆ ಜೊತೆ ಅರಿವೆ ಇಲ್ಲದ ನಿಸ್ಪೃಹ ಬದುಕು ಅವರದ್ದು. ಆದರೆ ಅವರಿಗೆ ಶುಶ್ರೂಷೆ ನೀಡಿದವರು ಸಾಮಾನ್ಯ ಜನರಲ್ಲ. ಕೊಚ್ಚಿ ರಾಜ್ಯದ ಉನ್ನತ ಹುದ್ದೆಯಲ್ಲಿದ್ದ ರಾಮಯ್ಯರ್ ಹಾಗೂ ಚಂದುಲಾಲ್ ಮಾತ್ರವಲ್ಲ ಅನೇಕ ಪಂಡಿತರು ಮತ್ತು ಹಿರಿಯರು ವಿವಧ ಉಪಚಾರ ನೀಡಿ ನೋಡಿಕೊಂಡಿದ್ದರು.

## ಕೃತಿ ರಚನೆ

ಯಾವುದೇ ವಿಷಯದಲ್ಲಿ ತನಗಿದ್ದ ಅಗಾಧ ಜ್ಞಾನದ ದೆಸೆಯಿಂದ ಏನಾದರೂ ಬರೆಯುತ್ತಿರುವುದು ಅವರಿಗೆ ಅಭ್ಯಾಸವಾಗಿ ಬಿಟ್ಟಿತು. ಮಲಯಾಳ, ಸಂಸ್ಕೃತ ಹಾಗೂ ತಮಿಳು ಭಾಷೆಗಳಲ್ಲಿ ಸಲೀಸಾಗಿ ವ್ಯವಹರಿಸಿದರು. ಜೊತೆಗೆ ಸಂಗೀತಾಸಕ್ತಿ, ಕವಿತಾ ರಚನೆಯ ಕೌಶಲ ಅವರನ್ನು ಅಕ್ಷರ – ಭಾವಲೋಕಗಳಲ್ಲಿ ಆಗಾಗ ಕ್ರಿಯಾಶೀಲರಾಗುವಂತೆ ಪ್ರೇರೇಪಿಸಿದ್ದವು. ಆದರೆ ಲೌಕಿಕ ವಿಚಾರಗಳಲ್ಲಿ ಒಂದಷ್ಟು ಅನಾಸಕ್ತರಿದ್ದುದರಿಂದಲೋ ಏನೋ ಅನೇಕ ಕೃತಿಗಳನ್ನು ಅರ್ಧಂಬರ್ಧ ಬರೆದು ಅಲ್ಲಲ್ಲಿ ಮರೆತು ಬಿಡುತ್ತಿದ್ದರು. ಅವರ ಜೊತೆಯವರು ಅದನ್ನೆಲ್ಲ ನಿಗಾವಹಿಸಿ ಸಂರಕ್ಷಿಸಿಕೊಳ್ಳಲೂ ಇಲ್ಲ.

**ಉಪಲಬ್ಧವಿರುವ ಅವರ ಪೂರ್ಣ ಗಾತ್ರದ ಕೃತಿಗಳು ಇವು :**

**ಪ್ರಾಚೀನ ಮಲೆಯಾಳಂ**

**ವೇದಾಧಿಕಾರ ನಿರೂಪಣಂ**

**ಜಂತುಕಾರುಣ್ಯ ನಿರೂಪಣಂ**

**ಆದಿಭಾಷೆ**

**ಕ್ರಿಸ್ತುಮತ ನಿರೂಪಣಂ**

**ಸರ್ವಮತ ಸಾಮರಸ್ಯಂ**

**ಅದ್ವೈತ ಚಿಂತಾಪದ್ಧತಿ**
**ಅದ್ವೈಯ ಪಂಜರಂ**
**ಚಿದಾಕಾಶಲಯಂ**

ಇಷ್ಟಲ್ಲದೆ ಮನೋನಾಶಂ, ದೇಶನಾಮಂಗಳ್, ಶರೀರ ತತ್ವ ಸಂಗ್ರಹಂ, ಒಳವಿಲೊಡುಕ್ಕಂ, ಪ್ರಪಂಚತ್ತಿಲ್ ಸ್ತ್ರೀ ಪುರುಷನ್ಮಾರ್ಕುಳ್ಳ ಸ್ಥಾನಂ, ತಮಿಳಕಂ ಮುಂತಾದ ಅನೇಕ ಪ್ರಬಂಧಗಳನ್ನೂ ಬರೆದಿದ್ದಾರೆ. ಇವೆಲ್ಲ ಆಗಿನ ಪತ್ರಿಕೆಗಳಲ್ಲಿ, ಮಾಸಪತ್ರಿಕೆಗಳಲ್ಲಿ ಮುದ್ರಣಗೊಂಡಿವೆ. ಅವರ ಶ್ರೀ ಚಕ್ರ ಪೂಜಾಕಲ್ಪಂ, ದೇವೀಮಾನಸ ಪೂಜಾಸ್ತೋತ್ರ ವ್ಯಾಖ್ಯಾನಗಳು ಕೂಡ ಉಲ್ಲೇಖನೀಯವೇ.

ಪ್ರಾಚೀನ ಮಲೆಯಾಳಂ, ವೇದಾಧಿಕಾರನಿರೂಪಣಂ, ಜಂತುಕಾರುಣ್ಯ ನಿರೂಪಣಂಗಳಲ್ಲಿ ಸ್ವಾಮೀಜಿಗಳ ಆಧ್ಯಾತ್ಮಿಕ ವ್ಯಕ್ತಿತ್ವವನ್ನೂ, ಉನ್ನತ ಚಿಂತನೆಗಳನ್ನೂ ದಟ್ಟವಾಗಿ ಕಾಣಬಹುದಾಗಿದೆ.

**ಪ್ರಾಚೀನ ಮಲೆಯಾಳಂ :** "ಕ್ಷತ್ರಿಯ ಸಂಹಾರದ ಪಾಪ ನಿವಾರಣೆಗಾಗಿ ಪರಶುರಾಮನು ಕೊಡಲಿ ಬಿಸುಟು ನಿರ್ಮಿಸಿದ ಕೇರಳವನ್ನು ವಿದೇಶದಿಂದ ಕರೆತಂದ ಬ್ರಾಹ್ಮಣರಿಗೆ ದಾನ ಮಾಡಿದ್ದೆಂಬ ಮಾತು ಕೇವಲ ಕಟ್ಟುಕಥೆ. ಪ್ರಕೃತಿಗೆ ಸಹಜವಾಗಿ ಸಮುದ್ರ ಸರಿದು ಕಾಲಾಂತರದಲ್ಲಿ ಆದ ಭೂಮಿ ಇದು. ಮಲಯ ಪರ್ವತ ನಿವಾಸಿಗಳಾದ ನಾಕನ್ಮಾರರು ಪರ್ವತದಿಂದ ಸಮುದ್ರದ ತನಕ ಜರುಗಿದ ಭೂಭಾಗಕ್ಕೆ ಪ್ರವೇಶಿಸಿ ಅದನ್ನು ಅಗೆದು ಕಡಿದು ಫಲಭೂಯಿಷ್ಠವಾದ ಪ್ರದೇಶವಾಗಿ ಮಾರ್ಪಡಿಸಿಕೊಂಡರು.

ಅರುವತ್ತನಾಲ್ಕು ಗ್ರಾಮಗಳಾಗಿಸಿ ಕೇರಳವನ್ನು ಆಳಿದ್ದ ನಾಕನ್ಮಾರರು ಸದಾಚಾರಿಗಳಾಗಿದ್ದರು, ಧೈರ್ಯಶಾಲಿಗಳಾಗಿದ್ದರು ಮತ್ತು ಆಳರಸರಂತಿದ್ದರು. ನಾಯನ್ಮಾರ್ ಎನ್ನುವವರು ಅವರ ಪರಂಪರೆಯವರೇ ಆಗಿರುತ್ತಾರೆ.

ಬ್ರಾಹ್ಮಣರು ಜೀವನೋಪಾಯಕ್ಕಾಗಿ ನಂತರ ಈ ಭೂಪ್ರದೇಶಕ್ಕೆ ಬಂದವರು. ಮೊದಲು ನಾಕನ್ಮಾರರ ಕೈಕೆಳಗೆ ಅನೇಕ ವೃತ್ತಿಗಳನ್ನು ಕೈಕೊಂಡು ಜೀವನ ನಡೆಸಿದರು.

ನಾಕ್ಕರರಿಂದ ದಾನಗಳನ್ನು ಸ್ವೀಕರಿಸುತ್ತಲೂ, ಸೇವಾವೃತ್ತಿಗೈದೂ ಸಂಪಾದಿಸುತ್ತ ಬಂದ ಆರ್ಯಬ್ರಾಹ್ಮಣರು ಕ್ರಮೇಣ ಮಲೆಯಾಳಿಗಳಾಗಿ ಮಾರ್ಪಟ್ಟರು. ಆರ್ಯಬ್ರಾಹ್ಮಣರ ವಾಡಿಕೆಯಂತೆ ಅವರಲ್ಲಿ ಯಜ್ಞೋಪವೀತವಿಲ್ಲದವರನ್ನು ಶೂದ್ರರೆನ್ನಬಹುದು. ಇಲ್ಲಿಗೆ ಬಂದು ವಾಸಿಸತೊಡಗಿದ ಬ್ರಾಹ್ಮಣರು ಯಜ್ಞೋಪವೀತವಿಲ್ಲದ ನಾಕನ್ಮಾರರನ್ನೂ ಶೂದ್ರರೆಂದು ಹೇಳತೊಡಗಿದರು. ಇದೊಂದು ವಿಶಿಷ್ಟ ರೀತಿಯ ಬಿರುದೆಂದು ಭಾವಿಸಿದ ಇವರು ಇಂತಹ ಹೆಸರಿಗಾಗಿ ಅಭಿಮಾನ ತಾಳಿದರು.

ಔದಾಸೀನ್ಯ, ಅಜ್ಞಾನ, ಅತಿ ಉದಾರತೆಯಂತಹ ಕೆಲವು ಸ್ವಯಂಕೃತ ತಪ್ಪುಗಳಿಂದಾಗಿ ನಾಕನ್ಮಾರರು ಅವಮಾನಿತರಾಗಿಯೂ, ಅಡಿಯಾಳುಗಳಾಗಿಯೂ ಮಾರ್ಪಟ್ಟರು. ಇನ್ನು ಮುಂದಾದರೂ ಇವರು ತಮ್ಮ ಕರ್ತವ್ಯಗಳನ್ನು ಮನಗಂಡು, ಕೆಟ್ಟಹೆಸರು, ಸೋಲುಗಳನ್ನು ನಿವಾರಿಸಿಕೊಂಡು ಆತ್ಮಾಭಿಮಾನವನ್ನು ಹೊಂದಿ ಹಿಂದಿನಂತೆ ಬದುಕಬೇಕು ಮತ್ತು ಬೆಳಗಬೇಕು."

ಹೀಗೆ ಅನೇಕ ಪ್ರಾಚೀನ ದಾಖಲೆಗಳನ್ನು ಪರಿಶೀಲಿಸಿ ಯುಕ್ತವಾದ ವಿವರಣೆಗಳ ಸಹಿತ ಈ ಗ್ರಂಥವನ್ನು ಬರೆದಿದ್ದಾರೆ. ಈ ಕೃತಿ ಆ ಕಾಲದಲ್ಲಿ ಕೇರಳೀಯರನ್ನು ವಿಶಿಷ್ಟ ರೀತಿಯಲ್ಲಿ ಅಭಿಮಾನಿಗಳಾಗುವಂತೆ ಮಾಡಿತು. ಸರ್ವ ಸಮಾನತೆಯ ಧ್ವನಿ ಹೀಗೆ ಮೊದಲ ಬಾರಿ ಅವರಿಂದ ವ್ಯಕ್ತವಾಯಿತೆನ್ನಬಹುದು.

**ವೇದಾಧಿಕಾರ ನಿರೂಪಣಂ :** "ವೇದ ಅಪೌರುಷೇಯ ಎಂಬ ಪ್ರಚಾರ ಸರಿಯಲ್ಲ. ಋಗ್ವೇದದ ಆದಿಸೂಕ್ತವನ್ನು ಕೂಡ ವಿಶ್ವಾಮಿತ್ರ ಪುತ್ರನಾದ ಮಧು ಎಂಬ ಋಷಿ ಬರೆದಿದ್ದಾನೆ. ಉಳಿದೆಲ್ಲ ಸೂಕ್ತಗಳಿಗೂ ಕರ್ತೃಗಳಿದ್ದಾರೆ.

ಜ್ಞಾನ ಎನ್ನುವುದು ಆಸಕ್ತಿಯುಳ್ಳವರ ಸಾರ್ವಜನಿಕ ಸೊತ್ತು. ಅದನ್ನು ನೀರು, ಬೆಳಕು, ಗಾಳಿಯಂತೆ ಬಳಸಬಹುದು. ವೇದಾಧ್ಯಯನದ, ಅದನ್ನು ಕೇಳುವ ಮತ್ತು ಕಲಿಸುವ ಅಧಿಕಾರ ಎಲ್ಲರಿಗೂ ಇದೆ. ಅದರ ವಿರುದ್ಧದ ಪ್ರಚಾರಕ್ಕೆ ಯಾವುದೇ ಆಧಾರವಿಲ್ಲ. ಬೇಡನೊಬ್ಬನ ಮಗನಾದ ಕವಷನೆಂಬವನು ಕೂಡಾ ಸೂಕ್ತಗಳಲ್ಲೊಂದರ ಕರ್ತೃವಾಗಿದ್ದಾನೆ.

ಹುಟ್ಟಿನಿಂದ ಶೂದ್ರನಾದ ಕವಷ ಕರ್ಮದ ಮೂಲಕ ಬ್ರಾಹ್ಮಣನಾದಂತೆ ಸ್ವಕರ್ಮಾನುಷ್ಠಾನ ಹಾಗೂ ಶಾಸ್ತ್ರ ಜ್ಞಾನದ ಮೂಲಕವೂ ಬ್ರಹ್ಮಜ್ಞಾನದ ಅರ್ಹತೆಯನ್ನು ಸಂಪಾದಿಸಬಹುದು.

ಪರಮಪದ ಪ್ರಾಪ್ತಿಗೆ ಜೀವಾತ್ಮ ಪರಮಾತ್ಮ ಸ್ವರೂಪದ ಅರಿವೇ ಹೇತು. ಜಾತಿ ಮುಂತಾದ್ದು ಆ ಪರಮಪದಕ್ಕೆ ಬಂಧನವಾಗದು. ಪತಿತರಿಂದ ಪುರೋಹಿತರ ತನಕದ ಎಲ್ಲ ಮಾನವ ಸಮೂಹ ವೇದಾಧಿಕಾರ ಹೊಂದಿದೆ."

ವೇದಗಳ ಮೇಲೆ ಅತ್ಯಂತ ಪತಿತನಿಂದ ಯಾಗ ಪುರೋಹಿತನ ತನಕವಿರುವ ಎಲ್ಲಾ ಮನುಷ್ಯ ಸಮೂಹಕ್ಕೂ ಅಧಿಕಾರವಿದೆ.

ಕೈ ಬರಹದ ಗ್ರಂಥವಾದ ವೇದಾಧಿಕಾರ ನಿರೂಪಣಂ ಬೆಂಕಿಗಾಹುತಿ ಆಗದೇ ಉಳಿದದ್ದು ಒಂದು ಮಹಾಭಾಗ್ಯವೆಂದು ಹೇಳಬೇಕು. ಕೇರಳದ ಸದ್ದಿಲ್ಲದ ಕ್ರಾಂತಿಗೆ ಈ ಕೃತಿಯೇ ಪ್ರೇರಣೆ ಎನ್ನುವುದು ಸರ್ವವಿದಿತ.

**ಜಂತು ಕಾರುಣ್ಯ ನಿರೂಪಣಂ :** ಇದು ಪ್ರಾಣಿದಯೆಯ ಕುರಿತ ಸ್ವಾಮಿಗಳ ಪ್ರಮುಖ ಸಂದೇಶಗಳನ್ನು ಒಳಗೊಂಡಿದೆ. ಅಹಿಂಸಾ ಪರಮೋಧರ್ಮ ಎಂದು ಸಾರಿದ ಬುದ್ಧನ ನಂತರ

ಅದೇ ಧ್ಯೇಯ ವಾಕ್ಯವನ್ನು ಅರ್ಥ ಮಾಡಿಕೊಂಡು ಅನುಸರಿಸಿ ಪ್ರಚುರ ಪಡಿಸಿದ ಅವತಾರ ಪುರುಷನಾಗಿ ಸ್ವಾಮೀಜಿ ಇಲ್ಲಿ ಕಂಗೊಳಿಸುತ್ತಾರೆ.

ಲೋಕದ ಸ್ಥಿತಿಗೆ ಅಹಿಂಸೆಯೇ ಕಾರಣ. ಜನ್ಮವೆತ್ತಿದ ಯಾವುದೇ ಜೀವಿಗೂ ಸಾವು ಸಹಜ. ಆದುದರಿಂದ ಸೃಷ್ಟಿಯ ಉದ್ದೇಶ ಹಿಂಸೆಯಲ್ಲ. ಪ್ರಾಣಿ ಪಕ್ಷಿಗಳನ್ನು ಸೃಷ್ಟಿಸಿರುವುದು ನಾವು ಕೊಂದು ತಿನ್ನುವುದಕ್ಕಾಗಿ ಎಂದಿದ್ದರೆ ಹುಲಿ, ಸಿಂಹ ಮುಂತಾದ ಪ್ರಾಣಿಗಳು ಮನುಷ್ಯರನ್ನು ಹಿಡಿದು ತಿನ್ನುವುದೂ ಸಹಜವಾಗಿದೆ. ಅವುಗಳಿಗಾಗಿ ಮನುಷ್ಯನನ್ನು ಸೃಷ್ಟಿಸಲಾಗಿದೆ ಎನ್ನುವುದನ್ನು ಒಪ್ಪಬೇಕಾಗುವುದು.

ಸಿಂಹವೇ ಮೊದಲಾದುವುಗಳು ಹಸಿಮಾಂಸ ತಿನ್ನುವ ಜಾತಿಯವು. ಅದು ಅವುಗಳ ಸಹಜ ಗುಣ. ಮನುಷ್ಯನಾದರೆ ಪ್ರಾಣಿಗಳನ್ನು ಬೇಯಿಸಿ ವಿವಿಧ ರಸಗಳೊಂದಿಗೆ ತಿನ್ನಬೇಕಾಗುತ್ತದೆ. ಆದುದರಿಂದ ಮಾಂಸಾಹಾರ ಮನುಷ್ಯನಿಗೆ ಸಹಜ ಅಲ್ಲ. ಸಸ್ಯಾಹಾರಿಗಳು ಸಂಪೂರ್ಣ ಅಹಿಂಸಾ ಪರರೆಂದು ಯಾರೂ ವಾದಿಸುವುದಿಲ್ಲ. ಹಿಂಸಕರಿಂದ ಒಂದೆರಡು ಮೆಟ್ಟಿಲು ಕೆಳಗಿನವರು ಅಷ್ಟೆ. ಅಷ್ಟಕ್ಕಾದರೂ ಅಹಿಂಸೆಯ ಪರವಾಗಿರುವರೆಂದು ಹೇಳಬಹುದು.

ಹಣದಾಸೆ ಅಥವಾ ಪ್ರತಿಷ್ಠೆಗೆ ಮನಸ್ಸು ಮಾಡದೆ ಜೀವದಯೆಯನ್ನೇ ಮೆರೆಯುವವರನ್ನು ಪ್ರಾಣಿ ಪಕ್ಷಿಗಳು ಪ್ರೀತಿಸುತ್ತವೆ ಮತ್ತು ನಂಬುತ್ತವೆ.

ಹಿಂಸೆಯಲ್ಲಿ ಎರಡು ಬಗೆಯ ದೋಷಗಳಿವೆ. ಮೊದಲನೆಯದು ನೋಯಿಸುವುದು. ಎರಡನೆಯದು ಹಿಂಸೆಗೊಳಗಾಗುವ ಪ್ರಾಣಿಗಳ ರಕ್ಷಣೆಗೆ ಇರುವ ದಾರಿಯನ್ನು ತಡೆಯುವುದು. ನೋವು ಹೆಚ್ಚಾಗಿ ಚರ ವಸ್ತುಗಳಿಗಾಗುತ್ತದೆ. ತಡೆಯೊಡ್ಡುವುದರಿಂದ ಚರಾಚರಗಳಿಗೆ ಹಾನಿಯಿದೆ.

ಪ್ರಳಯಕಾಲದಲ್ಲಿ ಮೂಲ ಪ್ರಕೃತಿಯೊಂದಿಗೆ ಲೀನವಾದ ಆಸೆಗಳು ಮತ್ತು ಗುಣ ಸ್ವಭಾವಗಳೊಂದಿಗೆ ಹೊಂದಿ ಪ್ರತಿಯೊಂದು ಜೀವವೂ ಪ್ರತ್ಯೇಕ ಶರೀರವನ್ನು ಹೊಂದುತ್ತದೆ. ಇದರ ಗುರಿ ಮೋಕ್ಷ ಸಂಪಾದನೆ. ತಮ್ಮ ಔನ್ನತ್ಯಕ್ಕೆ ಹೊಂದಿಕೊಂಡು ಸ್ಫುಟ ಶರೀರವಾದ ಪ್ರತಿಯೊಂದು ಜೀವಿಯೂ ವಿವಿಧ ಶ್ರೇಣಿಗಳ ಶರೀರ ಹೊಂದುತ್ತದೆ. ಇವುಗಳು ಪರಿಪೂರ್ಣತೆಗೆ ಮುಟ್ಟಿ ಮುಕ್ತಿಯನ್ನು ಹೊಂದಬೇಕು. ಆದುದರಿಂದ ಅರ್ಧದಲ್ಲೇ ಕೊಲ್ಲಲ್ಪಟ್ಟ ಪ್ರಾಣಿಗಳು ಮತ್ತೆ ಅದೇ ಜನ್ಮವನ್ನು ಹೊಂದಬೇಕಾಗುತ್ತದೆ. ಮಹಾತ್ಮರು ಇದನ್ನು ಹಿಂಸೆಯೆನ್ನುತ್ತಾರೆ.

ಭಾರತದ ಹಿಂದೂ ಧರ್ಮ, ಜೈನ ಹಾಗೂ ಬೌದ್ಧ ಮತಗಳು ಅಹಿಂಸಾ ತತ್ವವನ್ನು ಒಪ್ಪಿಕೊಂಡಿವೆ. ಕೊಲ್ಲಬಾರದು ಎಂಬುದನ್ನು ತನ್ನ ಮತದ ತತ್ವಗಳಲ್ಲಿ ಒಂದಾಗಿ

ಮಾಡಿಕೊಂಡ ಕ್ರೈಸ್ತ ಮತವೂ ಹಿಂಸೆಯನ್ನು ವಿರೋಧಿಸುತ್ತದೆ. ಹೀಗೆ ಪ್ರಪಂಚದ ಧರ್ಮಗಳು ಅಹಿಂಸೆ ಮತ್ತು ಜೀವದಯೆಯನ್ನು ಗೌರವಿಸಿವೆ.

– ಮೇಲಿನ ಕೃತಿ ಮೊದಲು ಬಿಡಿ ಲೇಖನಗಳ ರೂಪದಲ್ಲಿ ಪ್ರಕಟವಾಗಿ ಆಮೇಲೆ ಪುಸ್ತಕವಾಯಿತು. ಕೃತಿಯ ಉದ್ದಕ್ಕೂ ಗಹನವಾದ ವಿಷಯಗಳನ್ನು ಶಾಸ್ತ್ರೀಯವಾಗಿ ಚಿಂತಿಸಿ ಉತ್ತಮವಾದ ಶೈಲಿಯಲ್ಲಿ ಬರೆಯಲಾಗಿದೆ.

**ಆದಿ ಭಾಷಾ** : ಇದು ಅವರ ತಮಿಳು ಗ್ರಂಥ. ಶ್ರೀ ಪನ್ನಿಶ್ಶೇರಿ ನಾಣು ಪಿಳ್ಳೆ ಮಲಯಾಳಕ್ಕೆ ಅನುವಾದಿಸಿದ್ದಾರೆ. ಈ ತನಕದ ಭಾಷಾ ಶಾಸ್ತ್ರಜ್ಞರು ಮತ್ತು ಇತಿಹಾಸಕಾರರಿಗಿಂತ ಭಿನ್ನವಾಗಿ ಈ ಕೃತಿ ಬರೆಯಲ್ಪಟ್ಟಿದೆ. ಮೂಲ ದ್ರಾವಿಡ ಭಾಷೆಯಾದ ತಮಿಳು ಒಂದು ಆದಿ ಭಾಷೆಯೆಂದೂ ಸೌತ್ ಏಷ್ಯಾದ ಕನ್ಯಾಕುಮಾರಿಯ ತೆಂಕು ಭಾಗದಲ್ಲಿ ಸಮುದ್ರ ಉಕ್ಕಿ ಬಂದ ವಿಚಾರ ತಮಿಳು ಪುರಾಣಗಳ ಒಂದು ಭಾಗದಲ್ಲಿ ಇದೆಯೆಂದೂ ಮುಂತಾಗಿ ಸ್ವಾಮೀಜಿ ಸಮರ್ಥಿಸಿದ್ದಾರೆ.

**ಕ್ರಿಸ್ತುಮತ ನಿರೂಪಣಂ** : ಕ್ರೈಸ್ತ ಮತಚ್ಛೇದನ, ಕ್ರೈಸ್ತಮತಸಾರ ಎಂಬ ಎರಡು ಭಾಗಗಳು ಇದರಲ್ಲಿ ಸೇರಿವೆ.

ಒಮ್ಮೆ ಸ್ವಾಮೀಜಿ ಏಟ್ಟುಮಾನೂರು ಮಹಾಕ್ಷೇತ್ರದ ಪಕ್ಕದಲ್ಲಿ ನಡೆದು ಹೋಗುತ್ತಿದ್ದರು. ಅಲ್ಲಿ ಕ್ರೈಸ್ತ ಮಿಶನರಿಗಳು ಒಂದು ಧಾರ್ಮಿಕ ಸಭೆ ನಡೆಸುತ್ತಿದ್ದರು. 'ವಿಗ್ರಹಾರಾಧಕರಾದ ಪಾಪಿಗಳೇ' ಎಂದು ಮುಂತಾಗಿ ಹಿಂದುಗಳನ್ನು ಬಾಯ್ತುಂಬ ಅವಹೇಳನದ ಭಾಷಣಗಳನ್ನು ಮಾಡುತ್ತಲೂ, ದೈವರಾಜ್ಯಕ್ಕೆ ತಲುಪುವುದಕ್ಕಾಗಿ ಕ್ರಿಸ್ತನನ್ನು ನಂಬುವುದಲ್ಲದೆ ಬೇರೆ ದಾರಿ ಇಲ್ಲ ಎಂದು ಮುಂತಾಗಿ ಘೋಷಿಸುತ್ತಲೂ ಇದ್ದರು. ಅವರ ಆಧ್ಯಾತ್ಮಿಕ ಉದ್ದೇಶ ಮತಾಂತರವಾಗಿತ್ತು. ಹಿಂದೂ ಧರ್ಮವನ್ನು ನಾಮಾವಶೇಷ ಮಾಡುವುದಕ್ಕೆ ಇಂತಹ ಕಾರ್ಯಕ್ರಮಗಳು ಸಹಾಯವಾಗುತ್ತವೆಯೆಂದು ಸ್ವಾಮೀಜಿ ಭಾವಿಸಿದರು. ತಡ ಮಾಡದೆ ಅವರು ಕ್ರಿಸ್ತು ಮತಚ್ಛೇದನಂ ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದರು. ಇದಕ್ಕೆ ಭಾರೀ ಬೇಡಿಕೆಯಿತ್ತು. ಉದಾಸೀನ ಮನಸ್ಕರಾದ ಹಿಂದೂಗಳು ಎಚ್ಚೆತ್ತರು. ಕ್ರೈಸ್ತ ಧಾರ್ಮಿಕ ಸಭೆಗಳಾಗುವಲ್ಲಿ ಕೃತಿಯನ್ನು ಆಧರಿಸಿ ಕಾರ್ಯಕ್ರಮಗಳಾದವು. ಕಾಳಿಯಾಂಕಲ್ ನೀಲಕಂಠ ಪಿಳ್ಳೆ, ಕರುವಾ ಕೃಷ್ಣನಾಶಾನ್ ಏರತ್ತ್ ಮುಂತಾದವರು ಸ್ವಾಮೀಜಿಯ ಕರೆಗೆ ಓಗೊಟ್ಟು ಭಾಷಣಗಳನ್ನು ಮಾಡಿದರು.

ಇದರಿಂದ ಒಂದಷ್ಟು ಯಶಸ್ಸೂ ದೊರಕಿತು. ಸ್ವಾಮಿ ತಿರುವಡಿಗಳು ಹಾಗೂ ಶ್ರೀ ನಾರಾಯಣ ಗುರುಗಳ ಪ್ರಭಾವದಿಂದಾಗಿ ಮತ ಪರಿವರ್ತನೆಗೆ ಕಡಿವಾಣ ತೊಡಿಸಿದಂತಾಯಿತು.

ಜನರನ್ನು ವಂಚಿಸುವುದಕ್ಕಾಗಿ ಮಿಶನರಿಗಳು ಪ್ರೀತಿಯ ಸಿದ್ಧಾಂತದ ಮೇಲೆ ನಿಂತ ಕ್ರೈಸ್ತಮತವನ್ನು ಎಷ್ಟರ ತನಕ ದುರುಪಯೋಗ ಪಡಿಸುತ್ತಾರೆ! ಅವರ ಮತ ಪ್ರಚಾರ ಯಾವ ಬಗೆಯದ್ದು? ಅವರ ಪೂರ್ವ ಚರಿತ್ರೆ ಏನು? ಈ ಎಲ್ಲ ವಿಷಯಗಳನ್ನು ಪ್ರಮಾಣ ಸಹಿತ ಪ್ರತಿಪಾದಿಸುವ ಸ್ವರೂಪದಲ್ಲಿ ಈ ಗ್ರಂಥವಿತ್ತು. ಈ ಗ್ರಂಥದ ಮೂಲಕ, ತಾನು ಕ್ರೈಸ್ತ ಮತದ ಕುರಿತು ಗಳಿಸಿರುವ ಜ್ಞಾನವನ್ನು ಕೂಡ ಸ್ವಾಮೀಜಿ ವ್ಯಕ್ತಪಡಿಸಿದರು. ಕ್ರೈಸ್ತ ಮತದ ಸಾರವನ್ನು ಓದಿದ ಅನೇಕ ಪಾದ್ರಿಗಳೂ ತಪ್ಪನ್ನು ತಿದ್ದಿಕೊಂಡರು.

## ಇತರ ಕೃತಿಗಳು

**ಅದ್ವೈತ ಚಿಂತಾಪದ್ಧತಿ, ಅದ್ವೈತಪಂಜರಂ, ಚಿದಾಕಾಶಲಯಂ** ಎಂಬ ಕೃತಿಗಳು ತತ್ವ ವಿಚಾರಗಳಿಂದ ಒಡಗೂಡಿದ್ದು ಅದ್ವೈತದ ಮೇಲೆ ವಿವರಣೆ ನೀಡುವ ಗ್ರಂಥಗಳಾಗಿವೆ. ಶ್ರೀ ಶಂಕರರು ಪ್ರತಿಪಾದಿಸಿದ 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಪರಮ ತತ್ವವು ಸ್ವಾಮೀಜಿ ಅವರಿಂದ ಈ ಗ್ರಂಥಗಳಲ್ಲಿ ಪ್ರತಿಪಾದಿತವಾಗಿದೆ.

ಉತ್ತಮ ಶೈಲಿಯಿಂದ ಕೂಡಿದ್ದು ಗಹನವಾದ ವಿಷಯಗಳನ್ನು ತರ್ಕಬದ್ಧವಾಗಿ ನಿರೂಪಿಸಬಲ್ಲ ಸಾಮರ್ಥ್ಯ ಸ್ವಾಮೀಜಿಯವರದಾಗಿದ್ದು ಇದೇ ವಿಷಯಗಳ ಮೇಲೆ ಮಲಯಾಳದ ಯಾವ ಲೇಖಕನೂ ಈ ತನಕ ಇಷ್ಟು ಚೆನ್ನಾಗಿ ನಿಖರವಾಗಿ ಬರೆದಿಲ್ಲ ಎಂಬುದು ಗಮನಾರ್ಹ.

ಉಳಿದ ಕೃತಿಗಳ ವಿಷಯ ಆಯಾ ಶಿರೋನಾಮೆಗಳಿಂದಲೇ ವ್ಯಕ್ತವಾಗುತ್ತದೆ. ಮಲೆಯಾಳದ ಇತಿಹಾಸಕಾರರು ಸ್ವಾಮೀಜಿಯವರ ಬರವಣಿಗೆಯ ಶೈಲಿ, ನಿಷ್ಕೃಷ್ಟತೆ ಮತ್ತು ಪ್ರಾಮಾಣಿಕತೆಗಳನ್ನು ರೂಢಿಸಿಕೊಳ್ಳದಿರುವುದು ದೌರ್ಭಾಗ್ಯಕರ.

ತನ್ನ ಕವಿತ್ವವನ್ನೇ ಮೆರೆದಿದ್ದರೆ ಚಟ್ಟಂಬಿ ಸ್ವಾಮಿಗಳು ಮಲೆಯಾಳದ ಬೆರಳೆಣಿಕೆಯ ಹಿರಿಯ ಕವಿಗಳಲ್ಲಿ ಒಬ್ಬರಾಗಿರುತ್ತಿದ್ದರು. ಕೀರ್ತನೆಗಳ ರಚನೆಗಳಲ್ಲಾದರೂ ಅವರು ಇನ್ನಷ್ಟು ದುಡಿದಿದ್ದರೆ ತುಂಬ ಕೊಡುಗೆಗಳನ್ನು ನೀಡುತ್ತಿದ್ದರು. ಈ ಕ್ಷೇತ್ರದಲ್ಲಿ ಸ್ವಾಮೀಜಿಯವರ ಕೌಶಲವನ್ನು ತಿಳಿಯುವುದಕ್ಕೆ ಅವರ ಕೃತಿಗಳಿಂದ ಒಂದೆರಡಾದರೂ ಉದಾಹರಣೆ ನೋಡಬೇಕು.

## ಕವಿಯಾಗಿ ಮತ್ತು ಗಾನ ರಚನಕಾರನಾಗಿ

ಚಟ್ಟಂಬಿ ಸ್ವಾಮಿಗಳು ತನ್ನ ಇಷ್ಟದೇವತೆಯಾದ 'ಬಾಲ' ಎಂಬ ತ್ರಿಪುರ ಸುಂದರಿಯನ್ನು ಶ್ಲೋಕವೊಂದರಲ್ಲಿ ಭಕ್ತಿಯಿಂದ ಕೊಂಡಾಡಿದ್ದಾರೆ. ಆ ನೀಳ್ಗವನದ ಕೊನೆಯ ಗೆರೆಗಳಿವು –

ಬಾಲೇ ಬಾಲೇ ಮನೋಜ್ಞೇ ಪರಿಮೃದುಳತನೋ

ಯೋಗೀಜನ ನಿತ್ಯ ಉಣ್ಣುವರು
ಪಾಲೇ ಲೀಲೇ ನೆಲೆಸೆನ್ನ ಮನದಿ ಸುಕೃತ
ಸಂತಾನವಲ್ಲೀ, ಸುಚಿಲ್ಲೀ........

ಸ್ವಾಮಿಗಳು ರಚಿಸಿದ ಕೀರ್ತನೆಗಳ ಸಂಖ್ಯೆ ತಿಳಿದವರಿಲ್ಲ. ಕಾಲಹತಿಗೆ ಈಡಾಗಿಯೂ ಉಪಲಬ್ಧವಿರುವ ಕೀರ್ತನೆಗಳಲ್ಲಿ ಒಂದಾದ ಶಂಕರ ಕೀರ್ತನೆ ಈ ಕೆಳಗಿನಂತಿದೆ –

ಪಂತುವರಾಳಿ ರಾಗ – ಆದಿತಾಳ

ಪಲ್ಲವಿ

ಸ್ಮರರೇ ಶ್ರೀ ಶಂಕರ ಮಖಿಲ ಸುರೇಶಂ (ಸ್ಮರರೇ)

ಅನುಪಲ್ಲವಿ

ಮಾಕುರು ಮಾಕುರು ಮೂಢ ಚಾಪಲ್ಯಂ
ತ್ಯಕ್ತ್ವಾಸಂಗಂ ತತ್ವಾಗೀತಂ (ಸ್ಮರರೇ)

ಚರಣಂ

ಯಮಿನಾಂ ಮನ: ಪದ್ಮವಿರಾಜಿತ ಹಂಸಂ
ಧೃತಚಂದ್ರೋತ್ತಂಸಂ – ಮಾನಿನ್ಯಾ
ಶೋಭಿತ ಶುಭ ಸವ್ಯಾಂಗಂ
ಭವಪಾಪ ವಿಭಂಗಂ ಗಿರಿಜಾಲೋಲಂ
ಸದಾನಂದ ಮೀಶಂ ಚಿತ್ಪುರುಷಗಗನದೇಶಂ (ಸ್ಮರರೇ)

ಅಂತೂ ಸ್ವಾಮಿ ತಿರುವಡಿಗಳ ನಿರ್ಲಿಪ್ತತೆ, ನಿಸ್ಸಂಗತೆಗಳ ಕಾರಣದಿಂದಾಗಿ ಕಳೆದುಹೋದ ಅವರ ಕೃತಿಗಳಿಗಾಗಿ ನಾವು ದು:ಖ ಪಡುವುದಷ್ಟೇ ಸಾಧ್ಯ.

## ಪ್ರಾಣಿ ದಯಾಪರ ಕಥೆಗಳು

ಸ್ನೇಹ, ವಾತ್ಸಲ್ಯ, ಕರುಣೆಗಳಿಂದ ಕೂಡಿದ ಅಹಿಂಸೆ ಚಟ್ಟಂಬಿ ಸ್ವಾಮಿ ತಿರುವಡಿಗಳ ಜೀವನ ಸಂದೇಶವೆನ್ನುವುದು ಈಗಾಗಲೇ ಸ್ಪಷ್ಟವಾಗಿದೆ. ಅವರಿಗೆ ಸಂಬಂಧಿಸಿದ ಜೀವದಾಯಪರ ಕಥೆಗಳಿಗೆ ಕೊನೆಯೇ ಇಲ್ಲ. ಹಲವರ ಸ್ಮರಣೆಯಿಂದಲೇ ಅನೇಕ ಘಟನೆಗಳನ್ನು ಸಂಗ್ರಹಿಸಬಹುದು. ಬಹಳ ಕಡಿಮೆ ಸಂಖ್ಯೆಯಲ್ಲಿ ಅವುಗಳ ಸಂಗ್ರಹ ಕಾರ್ಯ ನಡೆದಿದೆ. ಅವುಗಳಲ್ಲಿ ಕೆಲವನ್ನಾದರೂ ಇಲ್ಲಿ ಸ್ಮರಿಸಬೇಕು.

ಸ್ವಾಮೀಜಿ ಏಳುಮಾಟೂರು ಆಶ್ರಮದಲ್ಲಿ ಮಾತ್ರ ಆರು ತಿಂಗಳು ವಾಸಿಸಿದರು. 1913 ರಲ್ಲಿ ಅವರ ಶಿಷ್ಯರ ಪರಿಶ್ರಮದಿಂದ ನಡೆದ ಷಷ್ಠಿಪೂರ್ತಿಯ ಸ್ಮಾರಕವಾಗಿ ಆ ಆಶ್ರಮ ನಿರ್ಮಾಣಗೊಂಡಿತು. ಆರೇ ತಿಂಗಳು ಅಲ್ಲಿ ಇದ್ದ ಸ್ವಾಮೀಜಿ ಹೊರಗಿಳಿದವರು ಸಂಚಾರದಲ್ಲೇ

ಕಾಲ ಕಳೆದರು. ತ್ರಿಶ್ಶೂರಿನ ವರೆಗೆ ಅವರು ಯಾತ್ರೆ ಕೈಗೊಂಡರು. ಅವರು ಎಲ್ಲಿ, ಯಾವಾಗ ಎಷ್ಟು ಸಮಯ ಇದ್ದರೆನ್ನುವುದು ನಿಗೂಢ ವಿಚಾರ. ಹಾಗಾಗಿ ಅವರ ಅನುಭವಗಳು ಅಥವಾ ಸಾಧನೆಗಳು ಎಲ್ಲೂ ಸಂಕಲನಗೊಂಡಿಲ್ಲ.

**ಇರುವೆಗಳು** ನಮ್ಮ ನಿತ್ಯ ಸಂಗಾತಿಗಳು ತಾನೇ? ಇವುಗಳು ನಮ್ಮ ದೇಹದ ಮೇಲೆ, ಆಹಾರ ವಸ್ತುಗಳ ಮೇಲೆ, ಚಾಪೆ, ನೆಲ, ಮಣ್ಣು, ಮೇಜು ಪೀಠಾದಿಗಳ ಮೇಲೆ ವಿಶ್ರಮಿಸುತ್ತವೆ ಮತ್ತು ಸಂಚರಿಸುತ್ತವೆ. ಅವುಗಳ ವಿಹಾರ ಕ್ರಮ ನೋಡುವುದಕ್ಕೆ ಕುತೂಹಲಕಾರಿ ಹೌದಾದರೂ ನಮಗಾಗಿ ಅವು ಕೈಗೊಳ್ಳುವ ಸೇವೆಗಳು ಹೆಚ್ಚು ಗಮನಾರ್ಹ. ಇಷ್ಟಾಗಿಯೂ ನಾವು ಅವುಗಳನ್ನು ರಗಳೆಯ ಪ್ರಾಣಿಗಳೆಂದು ಕಾಣುತ್ತೇವೆ.ಆದರೆ ಸ್ವಾಮೀಜಿಗೆ ಈ ಇರುವೆಗಳ ಮೇಲೆ ಬಹಳಷ್ಟು ಪ್ರೀತಿ. ಅಷ್ಟೇ ಹೇಳಿದರೆ ಸಾಲದು. ಅವರಿಗೆ ಈ ಕ್ಷುಲ್ಲಕ ಜೀವಿಗಳು ಮಕ್ಕಳಷ್ಟೇ ಪ್ರಿಯವಾಗಿದ್ದುವು. ಈ ಸತ್ಯಕ್ಕೆ ಅನೇಕ ನಿದರ್ಶನಗಳು ಅವರ ಬದುಕಿನಲ್ಲಿದ್ದರೂ ಒಂದನ್ನಷ್ಟೇ ನೆನೆಯೋಣ.

**ಒಂದು :** ಕ್ರಿ.ಶ. 1921. ಸ್ಥಳ ಮಾವೇಲಿಕರೆಯ ಆಂಡಿಪಿಳ್ಳ ಮೆಜಿಸ್ಟ್ರೇಟರ ವಸತಿ. ಭಾರೀ ಮಳೆ ಬೀಳುತ್ತಿದ್ದ ಒಂದು ಹಗಲು. ಸ್ವಾಮೀಜಿ ಒಂದು ಆರಾಮ ಕುರ್ಚಿಯ ಮೇಲೆ ವಿಶ್ರಮಿಸಿದ್ದರು. ಒಂದಿಬ್ಬರು ಜಗಲಿ ಹಾಗೂ ಚಾಪೆಯ ಮೇಲೆ ಕೂತಿದ್ದಾರೆ. ಮನೆಯ ಯಜಮಾನ ಆಂಡಿಪಿಳ್ಳ ಒಳಗೆ ಕುಳಿತುಕೊಂಡು ಕೆಲವು ಔದ್ಯೋಗಿಕ ಫೈಲುಗಳನ್ನು ನೋಡುತ್ತಿದ್ದಾರೆ. ಆಗ ಜಗಲಿಯ ಮೇಲೆ ಅನೇಕ ಇರುವೆಗಳು ಗುಂಪುಗೂಡಿ ಪರಸ್ಪರ ಎದುರಾಗಿ ನಿಂತುಕೊಂಡುದ್ದುವು. ಹಿಡಿಸೂಡಿಯೊಂದಿಗೆ ಬಂದ ಕೆಲಸದವನು ಇರುವೆಗಳನ್ನೆಲ್ಲ ಗುಡಿಸಿ ಅಂಗಳಕ್ಕೆ ಕೊಡವಿದ. ಇರುವೆಗಳು ಅಂಗಳದಲ್ಲಿ ಬಿದ್ದು ಹೊಡಚಾಡತೊಡಗಿದುವು. ಸ್ವಾಮಿ ತಿರುವಡಿಗಳು ಇದನ್ನು ನೋಡಿ ತುಂಬಾ ನೊಂದುಕೊಂಡರು. ಕಸಗುಡಿಸಿದವನನ್ನು ಎಚ್ಚರಿಸಿ ಮಾತನಾಡುವಾಗ ಅವರ ಕಣ್ಣುಗಳು ಒದ್ದೆಯಾಗಿದ್ದುವು. ಹಾಗೇ ಅವನಲ್ಲಿ ಒಂದಷ್ಟು ಅಕ್ಕಿ ಹುಡಿ ಮಾಡಿ ತರುವುದಕ್ಕೆ ಹೇಳಿದರು. ತಂದ ಗಂಟನ್ನು ಅವರೇ ಕೈಗೆತ್ತಿಕೊಂಡರು. ಕೆಳಗಿನ ಪುಟ್ಟ ಜಗಲಿಯ ಮೇಲೆ ಕೊಡವಿದವರೇ, 'ಬೇಗ ಬೇಗ ಹತ್ತಿ ಬನ್ನಿ ಮಕ್ಕಳೇ!' ಎನ್ನುತ್ತ ಒಂದು ವಿಚಿತ್ರ ಸ್ವರ ಹೊರಡಿಸಿದರು. ಮಣ್ಣಿನಲ್ಲಿ ಹೊರಳಾಡುತ್ತಿದ್ದ ಇರುವೆಗಳು ಕೂಡಲೇ ಸಾಲಾಗಿ ಒಂದರ ಹಿಂದೆ ಇನ್ನೊಂದಾಗಿ ದಿಬ್ಬಣದಂತೆ ಬಂದುವು. ಅಕ್ಕಿಹುಡಿ ಹರಡಿದಲ್ಲೆಲ್ಲ ಮುತ್ತಿಕೊಂಡವು. ಅವರು ಜಗಲಿಯಿಂದ ಈಚೆಗೆ ಕುಳಿತಿದ್ದು ಬಲದ ಪಾದವನ್ನು ಇರುವೆಗಳ ಸಮೀಪವೇ ಊರಿದ್ದರು. ಸ್ವಲ್ಪವೇ ಸಮಯದೊಳಗೆ ರೋಮಗಳಿಂದ ತುಂಬಿದ ಆ ಕಾಲನ್ನು ಇರುವೆಗಳು ಪೂರ್ತಿಯಾಗಿ ಮುತ್ತಿಕೊಂಡುವು. ಹೆಚ್ಚು ಕಡಿಮೆ ಮುಕ್ಕಾಲು ಗಂಟೆ ಹೊತ್ತು ಸರ್ವಭೂತ ಪ್ರಿಯನಾದ ಸ್ವಾಮೀಜಿ ಆ ಇರುವೆಗಳ ಸ್ಪರ್ಶಾನುಭವವನ್ನು ಸವಿದರು! ನೋಡಿ

ನಿಂತಿದ್ದವರು ಆಶ್ಚರ್ಯಭರಿತರಾದರು. ಬಾಕಿಯಾಗಿದ್ದ ಅಕ್ಕಿಹುಡಿಯನ್ನು ಸ್ವಲ್ಪ ತಡೆದು ಇನ್ನಷ್ಟು ದೂರ ಹರಡಿದ ಮೇಲೆ 'ಇಳಿದು ಹೋಗಿ' ಎಂದು ಸ್ವಾಮೀಜಿ ವಿಜ್ಞಾಪಿಸಿಕೊಂಡರು. ಅವುಗಳಾದರೋ ತಮ್ಮಿಂದಾದಷ್ಟು ಅಕ್ಕಿಕಡಿಗಳನ್ನು ಹೊತ್ತು ಒಂದೊಂದಾಗಿ ಸರಿದು ಮರೆಯಾಗಿ ಬಿಟ್ಟುವು.

ಇರುವೆಗಳಿಗೆ ಸಂಬಂಧಿಸಿದ ಇಂತಹ ಅನೇಕ ಘಟನೆಗಳ ಬಗ್ಗೆ ಜನರು ಆಡಿಕೊಳ್ಳುತ್ತಾರೆ. ಹೆಚ್ಚಿನವು ಪರಸ್ಪರ ಹೋಲಿಕೆ ಇರುವ ಘಟನೆಗಳೇ ಆಗಿವೆ.

**ಇನ್ನೊಂದು ಕಥೆ** : ಜೇಡನಿಗೆ ಸಂಬಂಧಿಸಿದ್ದು. ಕರುನಾಗಪಳ್ಳಿಯ ಒಂದು ಕುಟುಂಬಕ್ಕೆ ಸೇರಿದ ಮನೆಯ ಸೋಫಾದಲ್ಲಿ ಸ್ವಾಮೀಜಿ ವಿಶ್ರಾಂತಿಯಲ್ಲಿದ್ದರು. ಮಧ್ಯಾಹ್ನ ದಾಟಿತ್ತು. ಎಂದಿನಂತೆ ಅವರು ತಲೆಯಾಡಿಸುತ್ತಿರಲಿಲ್ಲ. ಬಹುಶ: ಅವರು ನಿದ್ದೆ ಹೋಗಿರಬೇಕು. ಸ್ವಾಮೀಜಿಯ ತಲೆಯ ಮೇಲುಗಡೆ ಬಲೆಯನ್ನು ಹೆಣೆಯುವುದಕ್ಕಾಗಿ ಜೇಡವೊಂದು ಶ್ರಮಿಸುತ್ತಿತ್ತು! ಮೌನವಾಗಿದ್ದುಕೊಂಡು, ಶ್ವಾಸವನ್ನು ಕೂಡಾ ಹಿಡಿದಿಟ್ಟುಕೊಂಡು ಕೈಯಲ್ಲಿದ್ದ ಬೀಸಣಿಗೆಯ ಸಹಾಯದಿಂದ ಯಜಮಾನ ಬೋಧೇಶ್ವರರು ಅದನ್ನು ಗುಡಿಸಿ ಆಚೆ ಮಾಡುವ ಕೆಲಸದಲ್ಲಿ ತಲ್ಲೀನರಾದರು. ಅಷ್ಟರಲ್ಲಿ ಕಣ್ಣು ತೆರೆದು, ಗಡ್ಡವನ್ನು ನೀವಿಕೊಂಡ ಸ್ವಾಮೀಜಿ,

"ನಿಲ್ಲು ನಿಲ್ಲು! ಇದೆಂಥಾ ಅಕ್ರಮ. ಇಲ್ಲಿಗೆ ಬಂದು ಎಷ್ಟು ದಿನಗಳಾದುವು?" ಎಂದು ಪ್ರಶ್ನಿಸಿದರು. ಉತ್ತರದ ನಿರೀಕ್ಷೆಯಿಟ್ಟುಕೊಂಡು ಮುಖವನ್ನೇ ನೋಡಿದರು.

ಒಂದಿಷ್ಟು ಅಪ್ರತಿಭರಾದರೂ ಸ್ವಲ್ಪ ಉದಾಸೀನ ತಾಳಿ, ಇದು ಹಾಸ್ಯ ಮಾಡುವ ಪರಿಯೆಂದೇ ಭಾವಿಸಿ ಬೋಧೇಶ್ವರರು ಸುಮ್ಮನೆ ನಿಂತರು.

ಪುನ: ಬಂತು ಸ್ವಾಮೀಜಿಯ ಪ್ರಶ್ನೆ "ಇಲ್ಲಿಗೆ ಬಂದು ಎಷ್ಟು ದಿನಗಳಾದುವು?"

"ಕೆಲವು ದಿನಗಳಷ್ಟೆ" ಅವರು ಉತ್ತರಿಸಿದರು.

"ಇಷ್ಟಾಗಿಯೂ ಇವರನ್ನು ಮನೆಯಿಂದ ಹೊರದಬ್ಬಬಹುದೆಂದು ಯೋಚಿಸಿದ್ದೆಯಾ? ರಕ್ಷಕರಿಲ್ಲದ ಪುಟ್ಟ ಮರಿಗಳ ಒಡಗೂಡಿ ಬದುಕುತ್ತಿರುವವರನ್ನು ಮುಗಿಸಿಬಿಡುವ ಯೋಚನೆಯೇನು? ಶಕ್ತಿಯನ್ನು ಅನ್ಯಾಯಕ್ಕಾಗಿ ಹೀಗೂ ಬಳಸುವುದೆ?"

ಶ್ರೀ ಬೋಧೇಶ್ವರ ಸ್ತಬ್ಧರಾಗಿ ನಿಂತುಬಿಟ್ಟರು. "ನಾವು ಯಾರಿಗೂ ತೊಂದರೆ ಕೊಡಬಾರದು. ಆ ಹಕ್ಕು ನಮಗಿಲ್ಲ" ಹೀಗೆ ಆ ಋಷಿವರ್ಯ ಗಂಭೀರವಾದ ಆಜ್ಞೆಯೊಂದಿಗೆ ಆ ಸಂದರ್ಭಕ್ಕೆ ಕೊನೆಹಾಡಿದರು.

ಶ್ರೀ ಬೋಧೇಶ್ವರರೆಂದರೆ ಹೆಸರಾಂತ ಕವಿ ಹಾಗೂ ಸದಾ ಕಾರ್ಯ ನಿರತ ಸಮಾಜಸೇವಕರಾಗಿದ್ದರು.

**ಎತ್ತಿಗೆ ಮೋಕ್ಷ ಕರುಣಿಸಿದ** ಇನ್ನೊಂದು ಘಟನೆ ಹೀಗಿದೆ. ಒಂದು ಸಂಜೆ ಹೊತ್ತು. ತನ್ನ ಯುವ ಮಿತ್ರನೊಂದಿಗೆ ಸ್ವಾಮೀಜಿ ನಡೆದಾಡುತ್ತಿದ್ದಾರೆ. ಅಷ್ಟರಲ್ಲಿ ಯಾರನ್ನೋ

ಒಯ್ಯುತ್ತಿದ್ದ ಒಂದೇ ಎತ್ತಿನಿಂದ ಎಳೆಯಲ್ಪಡುವ ಗಾಡಿ ಎದುರಾಯಿತು. ಎತ್ತಿನ ಕುತ್ತಿಗೆಗೆ ಒಂದು ಮಣಿಯನ್ನು ಕಟ್ಟಿದ್ದರು. ಅಲಂಕೃತ ಕೊಂಬುಗಳು. ಒಳಗಿದ್ದ ವ್ಯಕ್ತಿ . ಓರ್ವ ಧನಿಕ ವ್ಯಾಪಾರಿ.

ಗಾಡಿಯ ಆಗಮನವನ್ನು ಸ್ವಾಮೀಜಿ ಕುತೂಹಲದಿಂದ ಗಮನಿಸುತ್ತಿದ್ದರು. ಅವರ ಮನಸ್ಸಿನಲ್ಲಿ ಕೆಲವು ಹೊಸ ಯೋಚನೆಗಳು ಉದಿಸಿದುವು.

ಗಾಡಿ ತೀರಾ ಹತ್ತಿರವಾಯಿತು. ಓಡಿಸುವವನ ಇಚ್ಛೆಗೆ ವಿರುದ್ಧವಾಗಿ ಎತ್ತು ನಿಂತು ಬಿಟ್ಟಿತು. 'ನಮ್ಮ ದಾರಿಗೆ ಅಡ್ಡಬಂದ ಈ ಜಟಾಧಾರಿ ಯಾರು?' ಎಂದು ಗಾಡಿಯ ಒಡೆಯ ಮತ್ತು ವ್ಯಾಪಾರಿ ಒಟ್ಟಿಗೇ ಚಿಂತಿಸಿರಬೇಕು. ಚಾಲಕ ಎತ್ತಿಗೆ ಬಾರಿಸಲೆಂದು ಬಗ್ಗಿದ. ಆದರೆ ಅವನ ಎತ್ತಿದ ಕೈ ಕುಸಿದು ತನ್ನಷ್ಟಕ್ಕೆ ಬಾಗಿತು.

ಸ್ವಾಮೀಜಿ ಎತ್ತಿನ ಮುಖ ಮತ್ತು ಭುಜವನ್ನು ಪ್ರೀತಿ ಪೂರ್ವಕ ಸ್ಪರ್ಶಿಸಿ ಮೆಲ್ಲನೆ ತಡವಿದರು. ಆ ಮೂಕ ಪ್ರಾಣಿಯ ಕಣ್ಣುಗಳಿಂದ ಬಿಸಿ ಜಲ ಪ್ರವಾಹವೇ ಸುರಿಯಿತು. ಅವರ ಕಣ್ಣುಗಳೂ ಕರುಣೆಯಿಂದ ಒದ್ದೆಯಾಗಿದ್ದವು.

"ಅಪ್ಪಾ ಪರವಾಯಿಲ್ಲ. ನಾಳೆ ಸಂಜೆಗೆ ಮೊದಲು ಎಲ್ಲ ಸರಿಹೋಗುತ್ತದೆ. ಈಗ ಯಜಮಾನನನ್ನು ಮನೆಗೆ ತಲುಪಿಸು". ಅವರು ಎತ್ತಿಗೆ ಹೇಳಿದರು. ಅದು ತಲೆಯಾಡಿಸಿ ಮುಂದಕ್ಕೆ ಹೆಜ್ಜೆ ಹಾಕಿತು. ಸ್ವಾಮೀಜಿಯ ಜೊತೆಗಿದ್ದ ಯುವಕ ಅಚ್ಚರಿಗೊಂಡು ಕೇಳಿದ: "ಸ್ವಾಮೀಜಿ, ನಿಮ್ಮನ್ನು ಕಂಡು ಆ ಎತ್ತು ನಿಂತದ್ದೇಕೆ? ನಾಳೆ ಎಲ್ಲ ಸರಿಹೋಗುತ್ತದೆ ಎಂದ ಮಾತಿನ ಅರ್ಥವೇನು?"

ಸ್ವಾಮೀಜಿ ಸಮಂಜಸವಾದ ಯಾವುದೇ ಉತ್ತರವನ್ನು ಕೊಡದೆ, 'ನಾಳೆ ಬೆಳಗ್ಗೆ ನನ್ನಲ್ಲಿಗೆ ಬಾ' ಎಂದಷ್ಟೇ ಹೇಳಿದರು.

ಆ ಯುವ ಮುನ್‌ಸೀಫ ತಳಮಳದಿಂದಲೇ ರಾತ್ರಿ ಕಳೆದ. ಮರುದಿನ ಬೆಳಗಾತ ಸ್ವಾಮೀಜಿಯ ವಸತಿಗೆ ಧಾವಿಸಿದ. ಕಣ್ಣಾರೆ ಕಂಡ ಆ ದೃಶ್ಯದ ಹಿನ್ನೆಲೆಯನ್ನು ತಿಳಿಯಬೇಕೆಂಬ ಕುತೂಹಲ ಮಾತ್ರ ಆತನದಾಗಿತ್ತು. ಆದರೆ ತಾನೇ ಅದರಲ್ಲಿ ಮುಖ್ಯ ಪಾತ್ರವಾಗಿರುತ್ತೇನೆಂದು ಕನಸಿನಲ್ಲೂ ಭಾವಿಸಿರಲಿಲ್ಲ.

"ನೋಡಪ್ಪ ನಿನ್ನ ಅಪ್ಪ ಕುಟುಂಬ ಪೋಷಣೆಗೆ ತುಂಬ ಪಾಡುಪಟ್ಟ ಬಡಪಾಯಿ ವ್ಯಕ್ತಿ. ನಿನ್ನ ಶಿಕ್ಷಣಕ್ಕಾಗಿ ಅವರು ಆ ಧನಿಕ ಚೆಟ್ಟಿಯಾರನಿಂದ ಕೆಲವು ಕಂತುಗಳಾಗಿ ಸಾಕಷ್ಟು ಹಣ ಸಾಲ ಪಡೆದಿದ್ದರು. ಅದನ್ನು ಹಿಂತಿರುಗಿಸಲಾರದೆ ಅವರು ತೀರಿಕೊಂಡರು. ಚೆಟ್ಟಿಯಾರ್ ನಿನ್ನ ಬಳಿಗೆ ಕೆಲವು ಬಾರಿ ಆಳನ್ನು ಕಳುಹಿಸಿದರು. ಸಾಲದ ವಿಚಾರ ನನಗೆ ತಿಳಿಯದೆಂದೇ ನೀನು ಖಂಡಿತವಾಗಿ ವಾದಿಸುತ್ತ ಬಂದೆ. ಕ್ರಮೇಣ ನೀನು ನೌಕರಿಯಲ್ಲಿ ಬಡ್ತಿಗಳನ್ನು ಪಡೆದು ಮುನ್‌ಸೀಫ್ ಆದೆ. ಇನ್ನು ಆಸೆ ಇಟ್ಟು ಕೊಂಡು ಪ್ರಯೋಜನವಾಗದೆಂದು ಚೆಟ್ಟಿಯಾರ್

ಭಾವಿಸಿದರು. ಆ ಸಾಲ ತೀರಿಸುವುದಕ್ಕಾಗಿಯೇ ನಿನ್ನ ತಂದೆ ಎತ್ತಾಗಿ ಜನಿಸಿ ಚೆಟ್ಟಿಯಾರನ ಸೇವೆ ಮಾಡುತ್ತಿದ್ದಾರೆ. ಆ ಗಾಡಿಯೆಳೆಯುತ್ತಿದ್ದ ಧಡೂತಿ ಎತ್ತನ್ನು ನೋಡಿದೆಯಲ್ಲ? ಅದು ನಿನ್ನ ತಂದೆಯೇ. ಇವತ್ತು ಸಂಜೆಗೆ ಮುಂಚಿತವಾಗಿ ನೀನು ಆ ಸಾಲ ತೀರಿಸಿ ತಂದೆಯನ್ನು ವಿಮುಕ್ತನಾಗಿಸಬೇಕು."

ಅವರ ಈ ಮಾತುಗಳನ್ನು ಕೇಳುತ್ತ ಬಂದ ಮುನ್‌ಸೀಫನ ಪ್ರತಿಕ್ರಿಯೆ ಹೇಗಿತ್ತು? ಅವನು ಹೆದರಿ ನಡುಗಿ ಮನಸಾರೆ ಅತ್ತು ಬಿಟ್ಟು ಆ ಕರುಣಾ ಮೂರ್ತಿಯ ಪಾದಗಳನ್ನು ಹಿಡಿದು ಕೂಡಲೇ ಹೊರಗೋಡಿದ. ಒಂದಿಬ್ಬರು ಗೆಳೆಯರಿಂದ ಕಡ ಕೂಡಿಸಿ ಮಧ್ಯಾಹ್ನವೇ ಧಾವಿಸಿ ಚೆಟ್ಟಿಯಾರ್‌ಗೆ ಹಿಂತಿರುಗಿಸಿದ.

ಯಾವುದೇ ರೋಗ ಬಾಧೆಯಿಲ್ಲದ ಆ ಎತ್ತು ಆ ದಿನ ಸಂಜೆಗೆ ಮೊದಲೇ ಕುಸಿದು ಬಿದ್ದು ಕಣ್ಣು ಮುಚ್ಚಿತು.

**ಇನ್ನೊಂದು ಕಥೆ ಕೋಡನಾಟ್ಟ್ ಅರಣ್ಯದ ಹುಲಿಗೆ ಸಂಬಂಧಿಸಿದ್ದು,**

ಬೆಳಗಿನ ಹೊತ್ತು ಸ್ವಾಮೀಜಿ ನಡೆದಾಡುವ ಪರಿಪಾಠ ಇತ್ತು. ಹತ್ತು ಗಂಟೆಯೊಳಗೆ ಹಿಂತಿರುಗುತ್ತಿದ್ದರು. ಒಂದು ದಿನ ಅವರು ತಡವಾಗಿಯೂ ಹಿಂತಿರುಗಲಿಲ್ಲ. ಅವರನ್ನು ಭೇಟಿಯಾಗುವುದಕ್ಕಾಗಿ ಪರಾವೂರ್‌ನಿಂದ ಒಬ್ಬರು ಬಂದಿದ್ದರು. ಅವರು ತುಂಬ ಅವಸರದಲ್ಲಿದ್ದರು. ಹಾಗಾಗಿ ಪರಿಚಾರಕನಾದ ಪದ್ಮನಾಭ ಪಣಿಕ್ಕರ್ ಅತಿಥಿಯೊಂದಿಗೆ ಆಶ್ರಮದಿಂದ ಹೊರಟು ಬಂದು ದಾರಿಯಲ್ಲಿ ಸ್ವಾಮೀಜಿಯನ್ನು ಭೇಟಿಯಾಗುವುದಕ್ಕೆ ಸಹಕರಿಸಿದರು. ನಡೆದು ನಡೆದು ಅವರು ಚೆರುಕುನ್ನಿನ ಹತ್ತಿರ ತಲುಪಿದವರೇ ಸುತ್ತಲೂ ದೃಷ್ಟಿ ಹಾಯಿಸಿದಾಗ ಸ್ವಾಮೀಜಿ ದೂರದಲ್ಲಿ ಕಾಣಿಸಿಕೊಂಡರು. ಅವರು ಒಂದು ಭಾರೀ ಹುಲಿಯ ಮುಂದೆ ನಿಂತು ಕೊಂಡಿದ್ದಾರೆ! ಇಬ್ಬರಿಗೂ ಆಗ ಉಂಟಾದ ಭಯ ಮತ್ತು ಆಶ್ಚರ್ಯ ಅಸದಳವಾಗಿತ್ತು. ಹಾಗಾಗಿ ಪ್ರಾಣ ಭಯದಿಂದ ಹತ್ತಿರದ ಮರವನ್ನು ಏರಿ ನಡುಗುತ್ತ ಕುಳಿತು ಕೊಂಡರು. ಸ್ವಾಮಿಗಳಿಗೇನಾಗುತ್ತದೋ ಎಂಬ ಆತಂಕವೂ ಅವರನ್ನು ಕಂಗೆಡಿಸಿತ್ತು. ಸ್ವಾಮೀಜಿ ಈ ನಡುವೆ ಹುಲಿಯೊಂದಿಗೆ ಸಣ್ಣ ಸ್ವರದಲ್ಲಿ ಏನೇನೋ ಮಾತನಾಡುತ್ತಿದ್ದರು. ಸ್ವಲ್ಪ ಹೊತ್ತು ಕಳೆದು ಹುಲಿ ಅಲ್ಲಿಂದ ತಿರುಗಿ ಪೂರ್ವಭಾಗದಲ್ಲಿದ್ದ ತೇಗದ ಕಾಡಿನ ಕಡೆಗೆ ನಡೆಯತೊಡಗಿತು. ಸ್ವಾಮೀಜಿ ತಿರುಗಿ ಗುಡ್ಡದ ಕಡೆ ಹೆಜ್ಜೆ ಹಾಕಿದರು. ಅವರು ಹತ್ತಿರ ತಲುಪುತ್ತಿದ್ದಂತೆ ಪರಾವೂರ್‌ನಿಂದ ಬಂದಿದ್ದ ವ್ಯಕ್ತಿ ಮೆಲ್ಲ ಮರದಿಂದ ಇಳಿದು ಹತ್ತಿರ ಬಂದರು. ಅವರನ್ನು ಕಂಡದ್ದೇ ಆಶ್ಚರ್ಯದಿಂದ "ಯಾವಾಗ ಬಂದೆ? ಏನು ವಿಶೇಷ?" ಎಂದು ಮುಂತಾಗಿ ಪ್ರಶ್ನಿಸ ತೊಡಗಿದರು. ಆದರೆ ಆತ ಹತ್ತಿರವೇ ಇದ್ದ ಇನ್ನೊಂದು ಮರದ ಗೆಲ್ಲಿನ ಮೇಲೆ ಕುಳಿತಿದ್ದ ಪಣಿಕ್ಕರರನ್ನು ತೋರಿಸುವುದಕ್ಕೆ ಪ್ರಯತ್ನಿಸುತ್ತಿದ್ದರು. ಗಹಗಹಿಸಿ ನಗುತ್ತ ಸ್ವಾಮೀಜಿ ತನ್ನ ಪರಿಚಾರಕನನ್ನು ಕೆಳಗಿಳಿಯುವುದಕ್ಕೆ ಹೇಳಿದರು. ನಡುಗುತ್ತ ಹತ್ತಿರ ಬಂದ ಪಣಿಕ್ಕರ್ ಅವರ ಪಾದಗಳಿಗೆ ಅಡ್ಡಬಿದ್ದರು.

'ಎಂಥಾ ದೃಶ್ಯ ನೋಡುತಿದ್ದೆವು!. ನಮಗೆ ನೀವಲ್ಲದೆ ಬೇರೆ ಆಶ್ರಯ ಯಾರುಂಟು! ಆ ಭೀಕರ ಮೃಗವನ್ನು ಎದುರಿಸಿ ನಿಂತಿರುವುದನ್ನು ಕಂಡಾಗ ತಾವುಗಳು ಜೀವಂತವಾಗಿ ಹಿಂದೆ ಬರಲುಂಟೆ? ಎಂದು ನಾನು ಭಯಗೊಂಡೆ' ಎಂದೆಲ್ಲಾ ವಿಲಾಪಿಸತೊಡಗಿದರು.

'ಶಿಷ್ಯಾ ನಿನಗೇನು ಗೊತ್ತು ಜೀವನ ಧರ್ಮ. ಒಂದು ವೇಳೆ ನನ್ನ ದೇಹವನ್ನು ತಿಂದು ಅವನ ಹಸಿವು ಹಿಂಗುವುದಿದ್ದರೆ ಅದು ನಾನು ಕೃತಾರ್ಥನಾಗುವುದಕ್ಕೆ ಕಾರಣವಾಗದೆ? ಒಂದು ಸಾಧು ದನವನ್ನು ನಾನು ರಕ್ಷಿಸಲಿಲ್ಲವೇ' ಎಂದು ಉತ್ತರಿಸಿದರು.

ಕಣಿವೆಯಲ್ಲಿ ಹುಲ್ಲು ಮೇಯುತ್ತಿದ್ದ ದನಕರುಗಳ ಮೇಲೆ ಎರಗುವುದಕ್ಕಾಗಿ ಆ ಹುಲಿ ಪಶ್ಚಿಮದ ಕಾಡಿನಿಂದ ಇಳಿದುಬಂದಿತ್ತು. ಅದು ಬರುತ್ತಿರುವುದನ್ನು ಹೇಗೋ ತಿಳಿದ ದನಕರುಗಳು ಹೆದರಿ ಹಿಂದಕ್ಕೆ ಓಡತೊಡಗಿದಾಗ ಉಳಿದುಬಿಟ್ಟ ಸಾಧು ದನವೊಂದರ ಮೇಲೆ ಹುಲಿ ಹಾರಬಂತು. ಅದನ್ನು ಗಮನಿಸಿದ ಸ್ವಾಮೀಜಿ ಹುಲಿಯನ್ನೇ ತಡೆದು ನಿಲ್ಲಿಸಿದ ಘಟನೆ ಅಲ್ಲಿ ನಡೆದಿತ್ತು!

ಜೀವದಯಾಪರನಾಗಿ ದನವನ್ನು ರಕ್ಷಿಸಿದ್ದು ಮತ್ತು ಪ್ರೀತಿಯಿಂದ ಹುಲಿಯನ್ನು ಶಾಂತವಾಗಿ ಹಿಂದೆ ಕಳುಹಿಸಿದ್ದು ಎಂತಹ ಘಟನೆ! ಪ್ರಾಣಿಯೊಂದನ್ನು ಮತ್ತೊಂದರಿಂದ ರಕ್ಷಿಸುವುದಕ್ಕಾಗಿ ತನ್ನ ಪ್ರಾಣವನ್ನೇ ಬಲಿಯೊಡ್ಡುವ ರೀತಿ ಅದಕ್ಕಿಂತ ರೋಮಾಂಚಕಾರಿ.

ಸ್ವಾಮಿ ತಿರುವಡಿಗಳು ಕೋಡನಾಟ್ಟ್ ಅರಣ್ಯದಲ್ಲಿ ಸಣ್ಣದೊಂದು ಆಶ್ರಮವನ್ನು ಕಟ್ಟಿ ಅಲ್ಲಿಗೆ ಆಗಾಗ ಹೋಗಿ ಬರುತ್ತಿದ್ದರು. ಹೆಚ್ಚಾಗಿ ಅವರ ಜೊತೆ ಪದ್ಮನಾಭ ಪಣಿಕ್ಕರ್ ಕೂಡಾ ಇರುತ್ತಿದ್ದರು. ಆ ಅರಣ್ಯದಲ್ಲಿ ಸ್ವಾಮೀಜಿ ಪ್ರಾಣಿಗಳೊಂದಿಗೆ ತೋರುತ್ತಿದ್ದ ಪ್ರೀತಿಸ್ನೇಹಗಳು ಹೀಗೆಯೇ ಅನೇಕ ಬಗೆಗಳಲ್ಲಿ ಜನಜನಿತವಾಗಿದೆ. ಅದಕ್ಕೆಲ್ಲಾ ಸಾಕ್ಷಿಯಾದ ಆ ಅರಣ್ಯವೇ ಧನ್ಯವೆನ್ನಬಹುದು.

ವೆಣ್ಮಣಿ ಎಂ. ಕೆ. ನಾರಾಯಣ ಪಿಳ್ಳೆ ತನ್ನ ಅನುಭವವೊಂದನ್ನು ಹೀಗೆ ನಿರೂಪಿಸಿದ್ದಾರೆ – "ಕೊಲ್ಲ ವರುಷ 1989 ಮಕರ ಅಥವಾ ಕುಂಭ ಮಾಸಂ ಕೊಲ್ಲಂನ ಪಶ್ಚಿಮಭಾಗದಲ್ಲಿರುವ ಕೋಟೂರು ಪದ್ಮನಾಭ ಪಿಳ್ಳೆ ಒಂದು ದಿನದ ಭಿಕ್ಷೆಗಾಗಿ ಸ್ವಾಮಿಗಳಿಗೆ ವಿಶೇಷ ಆಮಂತ್ರಣ ಕೊಟ್ಟಿದ್ದರು. ಹಿಂದಿನ ದಿನ ರಾತ್ರಿ ಊಟ ಮುಗಿಸಿ ಜ. ರಾಮನ್ ಮೆನೋನ್ ಹಾಗೂ ನನ್ನ ಜೊತೆ ಕೋಟ್ಟೂರಿಗೆ ಬರುವುದಾಗಿ ಸ್ವಾಮೀಜಿ ಆತಿಥೇಯರಿಗೆ ತಿಳಿಸಿದ್ದರು. ಹೀಗಿದ್ದರೂ ಆ ದಿನ ರಾತ್ರಿ ಪದ್ಮನಾಭ ಪಿಳ್ಳೆಯವರು ಸುಮಾರು ಹತ್ತು ಗಂಟೆಗೇ ಕೆಲವು ಗೆಳೆಯರೊಂದಿಗೆ ಈಚೆಗೆ ಬಂದರು. ಸ್ವಾಮಿಗಳು ಮತ್ತು ನಾವೆಲ್ಲರೂ ಒಂದಾಗಿ ರಾತ್ರಿ ಹನ್ನೊಂದು ಗಂಟೆಗೆ ಕೊಲ್ಲಂಗೆ ಹೊರಟೆವು. ಬೆಳಕನ್ನು ಹೊತ್ತವನು ಮುಂದಕ್ಕೆ ನಡೆಯುತ್ತಿದ್ದ. ಅವನ ಹಿಂದೆಯೇ ಸ್ವಾಮೀಜಿ. ಉಳಿದವರು ಮತ್ತೂ ಹಿಂದೆ ಇದ್ದರು. ರಾಮೇಶ್ವರಂ ಕ್ಷೇತ್ರದ ಹಿತ್ತಿಲಿನ ಪೂರ್ವಭಾಗದ ಒಂದು ಅಡ್ಡದಾರಿಯಲ್ಲಿ ಹೋಗುತ್ತಿದ್ದೆವು.

ಬೆಳಕಿನವನು ಇದ್ದಕ್ಕಿದ್ದಂತೆಯೇ ಹಿಂದೆ ಹಾರಿದ. ಒಂದು ಹಾವು ಎಂದು ಆವನು ನಡುಗುತ್ತಾ ಹೇಳಿದ. ಪುಣ್ಯಕ್ಕೆ ಆವನು ಹಾವನ್ನು ತುಳಿದಿರಲಿಲ್ಲ. ಒಂದು ದೊಡ್ಡ ಕನ್ನಡಿಹಾವು ಹೆಡೆಯೆತ್ತಿ ನೋಡುತ್ತಿತ್ತು. 'ಈ ಬದಿಯಿಂದ ಬಾ' ಎಂದ ಸ್ವಾಮಿಗಳು, ಬೆಳಕು ಹಿಡಿದವನನ್ನು ಕರೆದು 'ಇಷ್ಟಕ್ಕೇ ಹೆದರಬೇಡ' ಎಂದು ಧೈರ್ಯ ಹೇಳಿದರು. ಆಮೇಲೆ ಸ್ವಾಮೀಜಿ ಮುಂದೆ ನಡೆದು ಹಾವಿನ ಹೆಡೆಯ ಮೇಲೆ ಕಾಲಿನಿಂದ ನೀವಿಕೊಂಡು 'ಎಲವೋ ಮರಿ ಮೂರ್ಖ! ನೀನು ಹೀಗೆ ದಾರಿಯ ನಡುವೆ ಬಿದ್ದುಕೊಂಡರೆ ಯಾರಾದರೂ ದಾರಿಹೋಕರು ನಿನ್ನ ಕಥೆ ಮುಗಿಸಿಯಾರು, ಸೋಮಾರಿ ನೀನು ಇಲ್ಲಿಂದ ಸರಿದು ಆ ಪಾಳು ಕಟ್ಟಡದ ಆಚೆ ಕಾಣುವ ಮರದ ಪೊಟರೆಯಲ್ಲಿ ಮಲಗಿಕೋ ಯಾರಿಗಾದರೂ ತೊಂದರೆ ಕೊಟ್ಟೀಯಾ' ಎಂದು ಎಚ್ಚರಿಸಿದರು.

ಸ್ವಾಮೀಜಿಯ ವಾತ್ಸಲ್ಯಭರಿತ ಸಲಹೆಯನ್ನು ಶಿರಸಾವಹಿಸಿದ ರೀತಿಯಲ್ಲಿ ಆ ಹಾವು ಹೆಡೆ ತಗ್ಗಿಸಿ ನೇರವಾಗಿ ಸಾಗಿ ಮರದ ಪೊಟರೆಯಲ್ಲಿ ಕುಳಿತುಕೊಂಡಿತು! ನಾವೆಲ್ಲರೂ ಪ್ರಯಾಣವನ್ನು ಮುಂದುವರಿಸಿದೆವು."

ಹೀಗೂ ಒಂದು ಕಾಳಿಯ ಮರ್ದನ! ಇಂತಹ ಹಾವುಗಳಿಗೆ ಸಂಬಂಧಿಸಿದ ಕಥೆಗಳು ಸ್ವಾಮೀಜಿಗಳ ಜೀವನದಲ್ಲಿ ತುಂಬಾ ನಡೆದಿವೆ. ಅಮರೀಕಲ್ಪ ಸೇವೆಯ ಮೂಲಕ ಸ್ವಾಮೀಜಿಗಳ ಶರೀರವು ವಿಷಬಾಧೆಯನ್ನು ಎದುರಿಸುವ ಶಕ್ತಿಯನ್ನು ಪಡೆದಿತ್ತು. ಪ್ರಾಣಿಗಳನ್ನು ಕ್ಷುಲ್ಲಕಜೀವಿಗಳು, ಕ್ರೂರಜೀವಿಗಳು ಎಂದೆಲ್ಲಾ ವಿಭಜಿಸುವ ಮನುಷ್ಯನೇ ದುಷ್ಟ ಎಂದು ಒಮ್ಮೆ ಸ್ವಾಮಿಗಳು ಹೇಳಿದ್ದುಂಟು.

ಸ್ವಾಮೀಜಿಯವರ ಪ್ರಾಣಿದಯಾಪರ ಕಥೆಗಳನ್ನು ಉದಾಹರಿಸುತ್ತಾ ಹೋಗುವುದಕ್ಕೆ ಪುಟಗಳು ಸಾಲವು. ಹೀಗಿದ್ದೂ ಶ್ವಾನ ಭೋಜನವೊಂದರ ಘಟನೆಯನ್ನು ಇಲ್ಲಿ ವಿವರಿಸಲೇಬೇಕು.

ತಿರುವನಂತಪುರದ ಒಬ್ಬ ನಾಯರ್ ಮನೆತನದವರು ಸ್ವಾಮಿಗಳನ್ನು ಭಿಕ್ಷೆಗಾಗಿ ಆಮಂತ್ರಿಸಿದ್ದರು. ಮರುದಿನ ಬರುವುದಾಗಿಯೂ ಜೊತೆಗೆ ನಲುವತ್ತು ಮಂದಿ ಶಿಷ್ಯರೂ ಬರುತ್ತಾರೆಂದು ಸ್ವಾಮೀಜಿ ಹೇಳಿದರು. ತನ್ನ ಸಾಮರ್ಥ್ಯವನ್ನು ತೋರಿಸುವುದಕ್ಕೆ ಇದು ಸುಯೋಗ ಎಂದು ಭಾವಿಸಿದ ನಾಯರ್ ಇದಕ್ಕೆ ಸಂತೋಷದಿಂದ ಒಪ್ಪಿದರು. ಇದೇ ಭೋಜನಕೂಟದಲ್ಲಿ ಭಾಗವಹಿಸುವಂತೆ ಅವರು ಅನೇಕ ಬಂಧುಮಿತ್ರರನ್ನು ಕೂಡ ಆಮಂತ್ರಿಸಿದರು. ಹಿಂದಿನ ದಿನವೇ ತುಂಬ ಜನರು ನೆರೆದಿದ್ದರು. ದೊಡ್ಡ ಚಪ್ಪರವೇ ಅಣಿಗೊಂಡಿತ್ತು. ಸ್ವಾಮಿ ತಿರುವಡಿಗಳು ಹಸನ್ಮುಖರಾಗಿ ಮರುದಿನ ಚಪ್ಪರಕ್ಕೆ ಆಗಮಿಸಿದರು. ಆದರೆ ಒಬ್ಬಂಟಿಯಾಗಿ. ಶಿಷ್ಯರು ಯಾರೂ ಜೊತೆಗಿಲ್ಲ. ಆಮಂತ್ರಣ ನೀಡಿದವರಿಗೆ ಸಂಶಯ ಮೂಡಿತು. ಎಲೆ ಹಾಕುವ ಹೊತ್ತಾಯಿತು –

'ಸ್ವಾಮೀಜಿ ನಿಮ್ಮ ಶಿಷ್ಯರೆಲ್ಲಿ? ಊಟ ಎಲ್ಲರಿಗೂ ತಯಾರಿಸಿದ್ದೇವೆ. ಅವರು ಬಾರದಿದ್ದರೆ ಇದೆಲ್ಲಾ ಹಾಳಾದೀತಲ್ಲವೇ?'

'ನನ್ನ ಜೊತೆ 40 ಮಂದಿ ಇದ್ದಾರೆ. ನೀವು ಎಲೆ ಹಾಕಿ ಬಿಡಿ. ಹೊತ್ತಿಗೆ ಸರಿಯಾಗಿ ಬರುತ್ತಾರೆ'. ಈಗ ನಾಯರ್ ಸಮಾಧಾನಗೊಂಡರು. ಚಪ್ಪರದಲ್ಲಿ ಮೊದಲು ಸ್ವಾಮಿಗಳಿಗೆ ಸ್ಥಾನ. ಆಮೇಲೆ ಅವರ ಜೊತೆಗೆ ಮತ್ತು ಎದುರಿನ ಪಂಕ್ತಿಯಲ್ಲಿ ಸಾಲಾಗಿ ಎಲೆ ಹಾಕಿ ಇಕ್ಕಿದ್ದಾಯಿತು. ಅಷ್ಟರಲ್ಲಿ ಸ್ವಾಮಿಗಳು ಚಪ್ಪರದ ಬಾಗಿಲು ತೆರೆಯುವಂತೆ ಹೇಳಿದರು. ತೆರೆಯಿತೋ ಇಲ್ಲವೋ ವಿವಿಧ ಆಕೃತಿಯ, ಹಲವು ಬಣ್ಣಗಳ, ದಪ್ಪದ ಸಪೂರದ ನಲುವತ್ತು ನಾಯಿಗಳು ಒಳಗೆ ಪ್ರವೇಶಿಸಿ ಮನುಷ್ಯರ ಹಾಗೆಯೇ ಎಲೆಗಳ ಬುಡದಲ್ಲಿ ಕೈಗಳನ್ನು ಊರಿ ಕುಳಿತುಕೊಂಡವು. ಇಕ್ಕಿದ ಅನ್ನ ಮತ್ತು ಪದಾರ್ಥಗಳನ್ನು ಮೌನವಾಗಿ ತಿಂದು ಮುಗಿಸಿ ತೃಪ್ತಿಯಿಂದ ಬಾಲ ಅಲುಗಾಡಿಸುತ್ತಾ ನಿಂತುಕೊಂಡವು. ಒಟ್ಟಿಗೇ ಮನೆಯ ಮೊಗಸಾಲೆಯಲ್ಲೂ, ಅಂಗಳದಲ್ಲೂ, ಚಪ್ಪರದಲ್ಲೂ ಕಿಕ್ಕಿರಿದು ನೋಡುತ್ತ ನಿಂತಿದ್ದ ಜನರು ಆ ಅದ್ಭುತ ದೃಶ್ಯದ ಮುಂದೆ ಪುಳಕಿತರಾದರು.

ಭಿಕ್ಷೆ ಕಳೆದ ಮೇಲೆ ಪಲ್ಲಂಗದ ಮೇಲೆ ವಿಶ್ರಮಿಸಿದ ಸ್ವಾಮೀಜಿ ಆ ನಾಯಿಗಳ ಕುರಿತು ಪುಟ್ಟ ಪ್ರವಚನ ನೀಡಿದರು. ಕಳೆದ ಜನ್ಮದಲ್ಲಿ ಸರಕಾರಿ ನೌಕರರಾಗಿದ್ದು ಆಗ ಲಂಚ ಪಡೆಯುವುದೇ ಮುಂತಾದ ಭ್ರಷ್ಟಾಚಾರದಲ್ಲಿದ್ದು ಈಗ ನಾಯಿಗಳಾಗಿ ಜನ್ಮವೆತ್ತಿದ್ದಾರೆಂಬಂತೆ ಅವರ ಮಾತಿನ ಸಾರಾಂಶವಿತ್ತು. ಆಮೇಲೆ ಊಟವಿಕ್ಕಿದ ನಾಯರ್‌ಗೆ ಮತ್ತು ಕರುಣಿಸಿದ ಸ್ವಾಮೀಜಿಗೂ ಕೃತಜ್ಞತೆ ಸೂಚಿಸುವುದಕ್ಕಾಗಿ ಎಲ್ಲ ನಾಯಿಗಳೂ ಬಾಲ ಅಲುಗಾಡಿಸುತ್ತ ಚಪ್ಪರದಿಂದ ಹೊರಗಿಳಿದು ಮರೆಯಾದುವು.

ಅನೇಕ ಸಂದರ್ಭಗಳಲ್ಲಿ ನಾಯಿಗಳನ್ನು ಕರೆತಂದು ಅವುಗಳಿಗೆ ಊಟ ಕೊಡಿಸುವ ಅಭ್ಯಾಸ ಅವರಿಗಿತ್ತು ಅಂತಹ ಅನೇಕ ಘಟನೆಗಳಿವೆ. ಆದರೆ ಈ ನಾಯರ್ ಕುಟುಂಬದಲ್ಲಿ ನಡೆದ ಶ್ವಾನ ಭೋಜನ ಮಾತ್ರ ವೈಶಿಷ್ಟ್ಯ ಪೂರ್ಣವಾಗಿದ್ದುದರಿಂದಲೇ ಅಷ್ಟೆಲ್ಲ ಪ್ರಚಾರ ಗಿಟ್ಟಿಸಿದೆಯೆನ್ನಬಹುದು.

ಅಂತೂ ಪ್ರತಿಯೊಬ್ಬ ಅವತಾರ ಪುರುಷನಿಗೂ ಅವನದ್ದಾದ ಕಾರ್ಯಕ್ರಮ ಇರುತ್ತವೆನ್ನುವುದಕ್ಕೆ ಇಂತಹ ಘಟನೆಗಳು ಸಾಕ್ಷಿಯೆನಿಸುತ್ತವೆ.

ಅಳಿಲುಗಳು, ಗುಬ್ಬಚ್ಚಿ – ಇಲಿಗಳಂತಹ ಪುಟ್ಟ ಜೀವಿಗಳು ಸ್ವಾಮೀಜಿಯ ಮಡಿಲಲ್ಲಿ ಬಂದು ಕುಳಿತುಕೊಳ್ಳುವ ಹಾಗೂ ಅವರು ಅವುಗಳನ್ನು ಮೈದಡವಿ ಮುದ್ದಿಸುವ ಪರಿಪಾಠ ಜನಜನಿತವಾಗಿತ್ತು. ಅಂತಹ ಸಂದರ್ಭಗಳಲ್ಲಿ 'ಇವತ್ತು ತಿನ್ನಲಿಕ್ಕೆ ಏನೂ ಸಿಗಲಿಲ್ಲವೇನಪ್ಪಾ' ಎಂದು ಮುಂತಾಗಿ ಅವರು ವಿಚಾರಿಸಿಕೊಳ್ಳುತ್ತಿದ್ದ ರೀತಿ ಕುತೂಹಲ ಕೆರಳಿಸುವಂತಿರುತ್ತಿತ್ತು. ಅನೇಕ ಮಂದಿ ಅವರ ಕುರಿತು ಮಾತನಾಡುವಾಗ ಈ ರೀತಿಯ ಘಟನೆಗಳನ್ನು ಸ್ಮರಿಸುವುದು ವಾಡಿಕೆಯಾಗಿ ಬಿಟ್ಟಿದೆ.

# ಸಿದ್ಧಿ ಹೊಂದಿದ ಕ್ಷಣಗಳು

ನಿರಂತರ ಯೋಗಾಭ್ಯಾಸ ರೂಢಿಸಿದವರಿಗೆ ಸಿದ್ಧಿ ಪ್ರಾಪ್ತವಾಗುವುದು ಸಹಜ. ಕೆಲವರು ಹಣಕ್ಕಾಗಿ, ಪ್ರಚಾರಕ್ಕಾಗಿ ಮತ್ತು ಸ್ವಯಂ ತೃಪ್ತಿಗಾಗಿ ಚಮತ್ಕಾರಗಳನ್ನೂ ಪವಾಡಗಳನ್ನು ತೋರಿಸುವುದಿದೆ. ಆದರೆ ಚಟ್ಟಂಬಿ ಸ್ವಾಮಿಗಳು ಹಾಗೆ ಪ್ರದರ್ಶನ ನಡೆಸಿ ವಶೀಕರಣ ಮಾಡುವುದನ್ನು ಬಯಸಿದವರಲ್ಲ. ಅವರು ಅದನ್ನು ಹಿಂಸೆಯೆಂದು ಭಾವಿಸುತ್ತಿದ್ದರು ಕೂಡ. ಅಷ್ಟಲ್ಲದೆ ಅಂತಹ ಸಾಧನೆಯಿಂದ ಪ್ರೇಕ್ಷಕರು ಅಚ್ಚರಿ ಪಡುವುದರೊಂದಿಗೆ ಕೀಳರಿಮೆಗೂ ತುತ್ತಾಗುತ್ತಾರೆ. ಆದುದರಿಂದ ಭಕ್ತರ ಮನಸ್ಸನ್ನು ಎತ್ತರಕ್ಕೆ ಒಯ್ದು ಸಂಸ್ಕಾರ ನೀಡುವ ಕೆಲಸವನ್ನು ನಿರ್ವಹಿಸುವ ಜವಾಬ್ದಾರಿ ಸನ್ಯಾಸಿಗಳ ಮೇಲಿದೆಯೆಂದು ಅವರು ಅಭಿಮತ ವ್ಯಕ್ತಪಡಿಸಿದ್ದಿದೆ.

ಆತ್ಮ ರಕ್ಷಣೆ ಹಾಗೂ ಪರೋಪಕಾರದ ಇಚ್ಛೆಯಿಂದ ಯೋಗಿಗಳು ಪವಾಡಗಳನ್ನು ತೋರುವುದಿದೆ. ತನಗೆ ಭಿಕ್ಷೆಯಾಗಿ ನೀಡಿದ ನೆಲ್ಲಿಕಾಯಿಯಿಂದಲೇ ಮನೆಯ ಬಡತನವನ್ನು ಮನಗಂಡ ಶಂಕರಾಚಾರ್ಯರು ಕನಕಧಾರಾಸ್ತವವನ್ನು ಪಠಿಸಿ ಆ ಮನೆಯ ನೆಲ್ಲಿಕಾಯಿಯ ವೃಕ್ಷದಿಂದ ಚಿನ್ನದ ನೆಲ್ಲಿಕಾಯಿಗಳ ಮಳೆ ಬರಿಸಿದರು. ಅದು ಸ್ವಾರ್ಥ ಸಾಧನೆಗಾಗಿ ಅಲ್ಲ. ಚಟ್ಟಂಬಿ ಸ್ವಾಮಿಗಳೂ ಪವಾಡಗಳನ್ನು ತುಂಬ ವಿರಳವಾಗಿ ತೋರಿದ್ದರು. ಇತರರಿಗೆ ಕೆಲವು ಪಾಠಗಳನ್ನು ಹೇಳುವುದಕ್ಕಾಗಿ ಮಾತ್ರ ಅವರ ಕೆಲವು ಸಾಧನೆಗಳು ಸಹಾಯವಾದುವು. ಸದ್ಯ ಆತ್ಮರಕ್ಷಣೆಗಾಗಿ ಅವರು ಕೈಕೊಂಡ ಒಂದು ಪವಾಡವನ್ನಷ್ಟೇ ಇಲ್ಲಿ ಪ್ರಸ್ತಾಪಿಸೋಣ.

ವರ್ಷ 1916. ಮಳೆಗಾಲ. ಸ್ವಾಮಿ ತಿರುವಡಿಗಳು ಕೊಡುಙ್ಙಲ್ಲೂರಿನ ಒಬ್ಬ ಗೆಳೆಯನ ಅಸೌಖ್ಯದ ಬಗ್ಗೆ ವಿಚಾರಿಸಿ ಕೊಳ್ಳುವುದಕ್ಕಾಗಿ ಹೋಗಿ ಹಿಂತಿರುಗುತ್ತಿದ್ದರು. ಅವರು ಪರಾವೂರಿಗೆ ಬರಬೇಕಿತ್ತು. ಚಿಕ್ಕದೊಂದು ದೋಣಿಯಲ್ಲಿ ಪ್ರಯಾಣ ಸಾಗಿತ್ತು. ಎ. ಶ್ರೀನಾರಾಯಣ ಪಿಳ್ಳೆ ಹಾಗೂ ಮತ್ತೊಬ್ಬ ಗೆಳೆಯ ಜೊತೆಗಿದ್ದರು. ಹೊತ್ತು ಮುಸ್ಸಂಜೆಯಾಗ ತೊಡಗಿತ್ತು. ಅಜಿಕ್ಕೋಡನ್ನು ಬಳಸಿ ಹಿನ್ನೀರ ಸರೋವರಕ್ಕೆ ತಲುಪುತ್ತಲೇ ರಾತ್ರಿಯಾಗಿ ಹೋಯಿತು. ಗಾಳಿ ಮಳೆ ಮತ್ತು ಕೋಲ್ಮಿಂಚುಗಳ ಸಂಭ್ರಮ ಮೇರೆ ಮೀರಿತ್ತು. ಅಂಬಿಗ ಅಷ್ಟೊಂದು ಅನುಭವಿಯಲ್ಲ. ಸುತ್ತ ಎಲ್ಲೂ ಬೆಳಕಿನ ಸುಳಿವಿಲ್ಲ. ಅಜಾಗರೂಕತೆ ತೋರಿದರೆ ದೋಣಿ ಸಮುದ್ರವನ್ನು ಪ್ರವೇಶಿಸಿ ಬಿಡಬಹುದಾದ ಅಪಾಯವಿತ್ತು. ಮತ್ತೆ ನಿಯಂತ್ರಣ ಕನಸಿನ ಮಾತೇ ಸರಿ. ದಿಗ್ಭ್ರಾಂತನಾದ ಅಂಬಿಗ ಮುಂಗಾಣದೆ ಕೈಚೆಲ್ಲುವ ಸ್ಥಿತಿಯಲ್ಲಿದ್ದಾನೆ. ಗಾಳಿ, ಮಳೆ ಹಾಗೂ ಚಳಿಯಿಂದ ದೆಸೆಗೆಟ್ಟವರನ್ನು ಸಾಲದ್ದಕ್ಕೆ ಭಯವೂ ಮುತ್ತಿಕೊಂಡಿತು. ಹೆಚ್ಚು ತಡಮಾಡದೆ ದೋಣಿ ಒಂದು ಸುಳಿಗೆ ಸಿಕ್ಕಿಕೊಂಡಿತು. ಈಗ ಎಲ್ಲರೂ ನಡುಗಬೇಕಾದ ಸ್ಥಿತಿ! ನಾರಾಯಣ ಪಿಳ್ಳೆ ಮತ್ತು ಜೊತೆಗಾರ ಅಂಬಿಗ ಏನು ಮಾಡುತ್ತಿದ್ದಾನೆಂಬುದನ್ನು ನೋಡುವುದಕ್ಕೆ ಪ್ರಯತ್ನಿಸಿದರು. ಅವನು ಹುಟ್ಟಿನ ಕೈಚೆಲ್ಲಿ ಜೀವಭಯದಿಂದ ಸುರುಟಿ

ಬಿದ್ದು ಕೊಂಡಿದ್ದ! ಅವನನ್ನು ಕರೆದೆಬ್ಬಿಸುವುದಕ್ಕೆ ಪ್ರಯತ್ನಿಸಿದರೆ ಮಿಸುಕಾಡಲಿಲ್ಲ! ಹಾಗಾಗಿ ಪ್ರಾಣ ಭಯ ಉಳಿದವರನ್ನೂ ಆವರಿಸಿಕೊಂಡಿತು.

ಅವರೆಲ್ಲ ಸ್ವಾಮಿ ತಿರುವಡಿಗಳ ಹತ್ತಿರ ಹೊರಳಿದರು. ಅವರು ಯಾವುದೋ ಹಾಡನ್ನು ಗುನುಗುತ್ತಿದ್ದಾರೆ!

ಭಯಗ್ರಸ್ಥರಾದ ಅವರು ಸ್ವಾಮೀಜಿಯನ್ನು ಕೂಗಿದವರೇ "ಸ್ವಾಮೀಜಿ ಇದು ನಮ್ಮ ಕೊನೆಯ ಯಾತ್ರೆಯೆಂದು ತೋರುತ್ತದೆ. ತಮಗೂ ನಮ್ಮಿಂದಾಗಿ ಈ ದುರ್ಗತಿ ಬಂತೇ ? ಸುಳಿಗೆ ಸಿಕ್ಕಿ ನಮ್ಮ ದೋಣಿ ಸಮುದ್ರದೆಡೆ ಧಾವಿಸುತ್ತಿದೆಯಲ್ಲ. ಕೊಡುಂಙಲ್ಲೂರಿನ ರೇವಿಗೆ ಹತ್ತಿರವಾದರೆ ನಾವು ಉಳಿಯುವುದು ಹೇಗೆ?" ಎಂದರು. ಅದಕ್ಕೆ ಸ್ವಾಮೀಜಿ "ಈಗ ನಮಗೆ ಯಾವ ವಿಪತ್ತಿಗೂ ಸಮಯವಾಗಿಲ್ಲ. ಭಯ ಪಡದಿರಿ" ಎಂದು ನಿರ್ವಿಕಾರವಾಗಿ ಉತ್ತರಿಸಿದರು.

ದೋಣಿಯ ನಾಗಾಲೋಟವನ್ನೂ, ಮುಂದಿರುವ ಅಪಾಯವನ್ನೂ ಸ್ಪಷ್ಟವಾಗಿ ಕಾಣುತ್ತ ಮರಣ ಭಯವೂ ಹೊಕ್ಕ ವೇಳೆ ಸ್ವಾಮೀಜಿಯವರ ಶಕ್ತಿಯನ್ನು ನಂಬಿ ಸಮಾಧಾನದಿಂದಿರುವುದಾದರೂ ಹೇಗೆ?

ಹತ್ತು ಹದಿನೈದು ನಿಮಿಷಗಳು ಕಳೆದಾಗ ದೂರದಲ್ಲಿ ಒಂದು ಬೆಳಕು ಕಾಣಿಸಿತು. ಪ್ರಯಾಣಿಕರು ವಿಸ್ಮಯಗೊಂಡರು. ಪ್ರವಾಹ ಮತ್ತು ಸುಳಿಗೆ ವಿರುದ್ಧವಾಗಿ ಚಲಿಸಿದ ದೋಣಿ ತನ್ನಷ್ಟಕ್ಕೇ ಮೂತ್ತಕ್ಕುನ್ನಂ ದೇವಾಲಯವನ್ನು ಸಮೀಪಿಸುತ್ತಿತ್ತು. ಅವರೆಲ್ಲರಿಗೆ ಹೋದ ಜೀವ ಬಂದಂತಾಯಿತು. ಅರೆ ಪ್ರಜ್ಞಾವಸ್ಥೆಯಲ್ಲಿದ್ದ ಅಂಬಿಗನನ್ನು ತಟ್ಟಿ ಎಚ್ಚರಿಸಿದರು. ಅಷ್ಟರಲ್ಲಿ ದೇವಾಲಯದ ಅರ್ಚಕ ಮತ್ತು ಇತರರು ಜೊತೆಗೂಡಿ ಬಂದು ಇದಿರ್ಗೊಂಡರು. ಸ್ವಾಮೀಜಿ ಮತ್ತು ಸಂಗಾತಿಗಳು ಅದೇ ರಾತ್ರಿ ತಂತಮ್ಮ ಮನೆಗಳಿಗೆ ತಲುಪಿದರು!

ಎಂತಹ ದುರ್ಗಮ ಪ್ರವಾಹ ಮಾರ್ಗದಲ್ಲಿ ಅದೂ ರಾತ್ರಿ ವೇಳೆ ಯಾರೂ ಪ್ರಯಾಣಿಸಲಾಗದ, ಯಾವನೂ ಸಾಹಸ ತೋರಲಾಗದ ಮಳೆಗಾಳಿ ಚಳಿಯ ನಡುವೆ ನಡೆಸಿದ ಈ ಪಯಣದ ವೇಳೆ ಜೀವರಕ್ಷಣೆಯ ಸ್ವಾರ್ಥ ದೃಷ್ಟಿಯಿಂದ ಚಟ್ಟಂಬಿ ಸ್ವಾಮಿಗಳು ಪವಾಡವೊಂದನ್ನು ಮೆರೆದುಬಿಟ್ಟಿದ್ದರು!

ಶ್ರೀ ಪುತ್ತೇಲತ್ತ್ ನಾರಾಯಣ ಮೆನೋನ್‌ರವರ ತಾಯಿ ಮೃತರಾಗುವುದಕ್ಕೆ ಒಂದು ತಿಂಗಳ ಮೊದಲೇ ಸ್ವಾಮಿ ತಿರುವಡಿಗಳು ಎರ್ನಾಕುಳದಲ್ಲಿದ್ದರು. ಒಂದು ದಿನ ನಾಲ್ಕೈದು ಸನ್ಯಾಸಿಗಳ ಜೊತೆಗೆ ಮೆನೋನ್ ಮನೆಗೆ ಬಂದರು. ಹಾಸಿಗೆ ಹಿಡಿದಿದ್ದ ಅಮ್ಮನನ್ನು, ಮೆನೋನ್‌ರವರನ್ನು ಆಶೀರ್ವದಿಸಿ ಸಾಂತ್ವನ ಪಡಿಸಿದರು. ಕೆಲವೇ ಕ್ಷಣಗಳು ಕಳೆದು ಅಮ್ಮ ತೀರಿಕೊಂಡರು. ಕರ್ಕಾಟಕ ಮಾಸದ ತೀವ್ರ ಮಳೆಯ ವೇಳೆ ಶವ ಸಂಸ್ಕಾರಕ್ಕೆ ಸಿದ್ಧತೆ ನಡೆಸುವುದು ಕಷ್ಟವಾಗಿತ್ತು. "ಇದಕ್ಕೇನು ಪರಿಹಾರ" ಎಂದು ಮೆನೋನ್‌ರವರು ಸ್ವಾಮೀಜಿಯವರಲ್ಲಿ ಪ್ರಶ್ನಿಸಿದರು.

"ಹಾಗೇನು ಚಿಂತೆ ಬೇಡ, ಸಮಯಕ್ಕಾಗುವಾಗ ಮಳೆ ನಿಂತೀತು" ಎಂದು ಸ್ವಾಮಿಗಳು ಉತ್ತರಿಸಿದರು. ಸ್ವಾಮೀಜಿಹೇಳಿದಂತೆ ಎಲ್ಲಾ ಸಾಂಗವಾಗಿ ನೆರವೇರಿದ ಮೇಲೆ ಪುನ: ಆರಂಭವಾದ ಮಳೆ ಮರುದಿನದ ತನಕ ಮುಂದುವರಿಯಿತು. ಮತ್ತೆ ಮೆನೋನ್ ಚಿಂತೆಗೀಡಾದರು. ಸಾಧುಗಳಿಗೆ ಊಟ ಹಾಕದಿದ್ದರೆ ನಾನು ನನ್ನ ದೈವಭಕ್ತಿಯನ್ನೇ ನಿಲ್ಲಿಸುವ ಸ್ಥಿತಿ ಬರುತ್ತದೆ ಎಂಬಂತೆ ಮತ್ತೊಮ್ಮೆ ದೂರಿಕೊಂಡರು.

ಇಂತಹ ಮಾತುಗಳನ್ನು ಸ್ವಾಮೀಜಿ ಸಹಿಸುವವರಲ್ಲ. 'ಹಾಗೆಲ್ಲ ಹೇಳುವುದೆ! ಕಷ್ಟ ಪರಿಹಾರಕ್ಕೆ ದೇವರಲ್ಲಿ ಮನ:ಪೂರ್ವಕ ಪ್ರಾರ್ಥಿಸಿಕೊಳ್ಳಬೇಕು' ಇದು ಅವರ ಅಭಿಮತ. ಅಂತೂ ಈ ಸಲವೂ ಎಲ್ಲಾ ಕಾರ್ಯವಿಧಿಗಳು ಸಾಂಗವಾಗಿ ನೆರವೇರುವುದಕ್ಕೆ ಸಹಾಯ ನೀಡಿದ ಪ್ರಕೃತಿಗೆ ಮರುದಿನ ಸಂಜೆ ನಾಲ್ಕು ಗಂಟೆಯ ಹೊತ್ತಿಗೆ ಧನ್ಯವಾದ ಹೇಳುವಂತೆ ಸ್ವಾಮೀಜಿ ಒತ್ತಾಯಿಸಿದರು. ಇಂಥದ್ದೆಲ್ಲಾ ಪ್ರಸ್ತಾಪ ಯೋಗ್ಯವಲ್ಲದ ಪವಾಡವಲ್ಲದಿದ್ದರೂ ವ್ಯವಸ್ಥೆಯ ಚಿಕ್ಕಪುಟ್ಟ ಏರುಪೇರಿಗೂ ತಳಮಳಗೊಳ್ಳುವ ಜನರನ್ನು ಅವರ ಲೌಕಿಕ ವ್ಯವಹಾರಗಳಲ್ಲಿ ಕೂಡಾ ತಿದ್ದುವ ಸ್ವಾಮೀಜಿಯ ಸರಳತೆ ಅವರ ವ್ಯಕ್ತಿತ್ವಕ್ಕೆ ಮೆರುಗು ನೀಡುತ್ತಿತ್ತೆಂಬುದನ್ನು ಗ್ರಹಿಸಿಕೊಳ್ಳಬೇಕು.

ತುರವೂರಿನ ವಕೀಲ ಕೆ. ನಾರಾಯಣ ಪಿಳ್ಳೆಯವರ ಅತಿಥಿಯಾಗಿ ಸ್ವಾಮೀಜಿ ಚೇರ್ತಲದಲ್ಲಿ ತಂಗಿದ್ದರು. ಅವರ ಸಂದರ್ಶನಕ್ಕೆ ಪ್ರವಾಹೋಪಾದಿಯಲ್ಲಿ ಜನರು ಬಂದು ಹೋದರು. ಉಳಿದವರು ರಾತ್ರಿ ಹನ್ನೊಂದು ಗಂಟೆಯಾದಾಗ ನಿದ್ರಿಸಿ ಸ್ವಾಮೀಜಿಯವರ ಜೊತೆ ಮೂರೋ ನಾಲ್ಕೋ ಮಂದಿ ಮಾತನಾಡುತ್ತ ಕುಳಿತಿದ್ದರು. ಸ್ವಾಮೀಜಿಗಳೂ ನಿದ್ರಿಸುವ ಸಮಯವಾಯಿತು. ಅಷ್ಟರಲ್ಲಿ ಮನೆಯ ಯಜಮಾನ ಕಿಟಿಕಿ ಬಾಗಿಲುಗಳನ್ನು ಮುಚ್ಚುವುದಕ್ಕೆ ಹೊರಟರು. ಎರಡು ವಾರಗಳ ಹಿಂದೆ ಕಳ್ಳ ಕಾಕರು ಪ್ರವೇಶಿಸಿ ಬೆಲೆಬಾಳುವ ವಸ್ತುಗಳನ್ನು ದೋಚಿದ್ದರಿಂದ ನಾರಾಯಣ ಪಿಳ್ಳೆ ಹೀಗೆ ಜಾಗ್ರತೆ ವಹಿಸುತ್ತಿದ್ದರು.

ಸ್ವಾಮಿ ತಿರುವಡಿಗಳು ಕಿಟಿಕಿಗಳನ್ನು ಮುಚ್ಚುವುದಕ್ಕೆ ಬಿಡಲಿಲ್ಲ. "ನನಗೆ ಕಿಟಿಕಿ ಬಾಗಿಲುಗಳನ್ನು ಮುಚ್ಚಿದಲ್ಲಿ ನಿದ್ರಿಸಿ ಅಭ್ಯಾಸವಿಲ್ಲ. ನಿಮಗೆ ಕಳ್ಳತನವಾದೀತು ಎಂಬ ಭಯ ನಿಮಗಿದ್ದರೆ ಆ ಅದನ್ನು ಬಿಟ್ಟುಬಿಡಿ. ನಾನು ಇಲ್ಲಿ ಮಲಗಿರುವಾಗ ಯಾವ ಕಳ್ಳನೂ ಪ್ರವೇಶಿಸಲಾರ" ಎಂದರು. ಆ ಮಾತಿನಂತೆ ನಡೆದುಕೊಂಡದ್ದರಿಂದ ಎಲ್ಲರೂ ಮಲಗಿ ನಿದ್ರಿಸುವಂತಾಯ್ತು.

ರಾತ್ರಿ ಸುಮಾರು ಎರಡು ಗಂಟೆಯ ಹೊತ್ತಿಗೆ ಎಚ್ಚರಗೊಂಡ ಮನೆಯ ವಕೀಲರು, ಗೊರಕೆ ಹೊಡೆಯುತ್ತಿದ್ದ ಸ್ವಾಮೀಜಿಯನ್ನು ಕಂಡವರೇ ವಿಚಿತ್ರ ಯೋಚನೆಯೊಂದು ಹೊಕ್ಕು ಎದ್ದು ಕುಳಿತರು. ಅಲ್ಲಿಂದ ಎದ್ದು ಮೇಜಿನ ಮೇಲೆ ಇಟ್ಟಿದ್ದ ಟೈಂಪೀಸಿನ ಮೇಲೆ ಕೈಯಿಟ್ಟರು. ಆದರೆ ಆ ಕೈ ಅಲ್ಲೇ ಮರಗಟ್ಟಿದಂತಾಯಿತು. ಆಘಾತಗೊಂಡ ವಕೀಲರು ತಲೆ ತಿರುಗಿಸಿ

ಪಕ್ಕದಲ್ಲಿದ್ದ ಒಬ್ಬಾತನನ್ನು ಕರೆದು ಎಬ್ಬಿಸಿದರು. ವಕೀಲರನ್ನು ಮುಟ್ಟಿದ ಆ ವ್ಯಕ್ತಿಗೂ ಮತ್ತೆ ಅಲುಗಾಡುವುದಕ್ಕೆ ಸಾಧ್ಯವಾಗಲಿಲ್ಲ. ಮೂರನೇ ಸರದಿ ಎಂ.ಪಿ. ಪಣಿಕ್ಕರರದು. ಏನಾಯಿತು ಎಂದು ಕೇಳುತ್ತಾ ಬಂದವರೇ ಎರಡನೇ ವ್ಯಕ್ತಿಯನ್ನು ಮುಟ್ಟಿ ಅಲ್ಲಿಂದ ಕೈ ಹಿಂದಕ್ಕೆ ತೆಗೆಯಲಾಗದೆ ಹೌಹಾರಿ ಹೋದರು. ಅಷ್ಟರಲ್ಲಿ ಸ್ವಾಮೀಜಿ ಎಚ್ಚರಗೊಂಡವರೇ "ಪರೀಕ್ಷೆಯಲ್ಲಿ ಗೆದ್ದಿರೋ? ಸೋತಿರೋ?" ಎಂದು ನಗುತ್ತಾ ಪ್ರಶ್ನಿಸಿದರು. ಎಲ್ಲರೂ ನಾಚಿಕೊಂಡರು. ಒಟ್ಟಿಗೆ ಅವರ ಸಂಶಯಕ್ಕೂ ಪರಿಹಾರ ಸಿಕ್ಕಿತೆಂದು ಪ್ರತ್ಯೇಕ ಹೇಳಬೇಕಿಲ್ಲ ತಾನೆ. ತನ್ನನ್ನು ಪರೀಕ್ಷಿಸ ಬಂದವರನ್ನು ಪವಾಡದ ಮೂಲಕ ತಿದ್ದುವ ಸ್ವಾಮೀಜಿಯ ಕ್ರಮ ಹೀಗೆ ಕಲವು ಕಡೆ ವಿರಳವಾಗಿ ಅನಾವರಣಗೊಂಡಿದೆ.

ಮರವೂರ್ ಶ್ರೀ ಭಾಸ್ಕರನ್ ನಾಯರ್‌ಗೆ ಮಾವೇಲಿಕ್ಕರ ಹೈಸ್ಕೂಲ್ ಉಪಾಧ್ಯಾಯರಾದ ಶಂಕುಣ್ಣಿ ಮೆನೋನ್ ಅವರನ್ನು ತಿರುವನಂತಪುರದಲ್ಲಿ ಭೇಟಿಯಾಗಬೇಕಿತ್ತು. ಹಾಗೆ ಭಾಸ್ಕರನ್ ತನ್ನ ಗೆಳೆಯನೊಬ್ಬನೊಂದಿಗೆ ತಿರುವನಂತಪುರಕ್ಕೆ ಬಂದು ನಿಗದಿ ಪಡಿಸಿದ್ದ ಸ್ಥಳದಲ್ಲಿ ಹೇಳಿದ ಹೊತ್ತಿಗೆ ಕಾದು ಕುಳಿತರು. ಆದರೆ ಕಾದು ಕಾದು ನಿರಾಶರಾಗಿ ಹಿಂದಿರುಗಬೇಕಾದ ಪರಿಸ್ಥಿತಿ ಬಂತು. ಅಷ್ಟರಲ್ಲೆ ಆ ದಿನ ಸ್ವಾಮಿ ತಿರುವಡಿಗಳು ಡಾ। ಕೆ.ಜಿ. ಗೋಪಾಲ ಪಿಳ್ಳೆಯವರ ಮನೆಯಲ್ಲಿ ತಂಗಿರುವ ವಿಚಾರ ತಿಳಿದು ಭೇಟಿಗೆಂದು ಹೋದರು. ಆದೂ ಇದೂ ಮಾತಿನ ನಡುವೆ, ತಾನು ಬಂದ ಕೆಲಸ ಆಗದೆ ಹಿಂತಿರುಗಬೇಕಾಯಿತೆಂಬುದನ್ನು ಹೇಳಿಬಿಟ್ಟರು. ಹೇಗಿದ್ದರೂ ಆ ದಿನ ತನ್ನ ಜೊತೆ ಉಳಕೊಳ್ಳುವಂತೆ ಭಾಸ್ಕರನ್‌ಗೆ ಸ್ವಾಮಿ ತಿರುವಡಿಗಳು ಹೇಳಿದರು. ಮರುದಿನ ಬೆಳಗ್ಗೆ ಹೊರಡುತ್ತಿದ್ದಂತೆ ಬೇಕೆಂದೇ ಏನೇನೋ ಮಾತನಾಡಿ ತಡವಾಗುವಂತೆ ಮಾಡಿಬಿಟ್ಟರು. ಕೊನೆಗೂ 'ಇನ್ನು ಹೊರಡಿ' ಎಂದು ಸ್ವಾಮೀಜಿಯೇ ಹೇಳಿದ ನಂತರವೇ ಹೊರಡುವುದಕ್ಕೆ ಸಾಧ್ಯವಾಯಿತು. ಹೊರಡುತ್ತಿದ್ದಂತೆ ಸ್ವಾಮೀಜಿ, ಇಂತಹ ದಾರಿಯಲ್ಲೇ ನಡೆಯಿರಿ ಎಂದು ಸೂಚಿಸಿದ್ದರು. ಅವರು ಹಿಡಿದ ದಾರಿ ಇನ್ನೊಂದು ರಸ್ತೆಗೆ ಸೇರುವಲ್ಲಿ ಶಂಕುಣ್ಣಿ ಮೆನೋನ್ ಎಲ್ಲಿಂದಲೋ ಬಂದು ಎದುರಾದರು. ಒಂದೇ ನಿಮಿಷ ಕಳೆದಿದ್ದರೂ ಅವರು ಪರಸ್ಪರ ಭೇಟಿಯಾಗುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. 'ಸ್ವಾಮಿಗಳ ಸಹಾಯದಿಂದಾಗಿ ನಾವು ಭೇಟಿಯಾಗುವುದಕ್ಕೆ ಸಾಧ್ಯವಾಯಿತು' ಎಂದು ಭಾಸ್ಕರನ್ ಹೇಳಿದಾಗ ಮೆನೋನ್ ಕೂಡಾ ಆಶ್ಚರ್ಯಭರಿತರಾದರು. ಸ್ವಾಮೀಜಿ ಈ ಪುಟ್ಟ ಜಾದೂವನ್ನು ತೋರಿದ್ದು ಶರಣಾದ ತನ್ನ ಸಹಾಯಕ್ಕಾಗಿ ಎಂದೇ ಭಾವಿಸಿ ಭಾಸ್ಕರನ್ ಪುಳಕಿತಗೊಂಡರು.

ಒಂದು ದಿನ ಬೆಳಗಾತ ಸ್ವಾಮಿ ತಿರುವಡಿಗಳು ತಿರುವನಂತಪುರದ ವಳುದಕ್ಕಾಡಿನಲ್ಲಿರುವ ಮಿತ್ರನೊಬ್ಬನ ಮನೆಗೆ ತಲುಪಿದರು. ಯಜಮಾನ ಮತ್ತು ಅವರ ಶ್ರೀಮತಿಯವರು ಆದರದಿಂದ ಸ್ವಾಗತಿಸಿ ಪೀಠದಲ್ಲಿ ಕುಳ್ಳಿರಿಸಿದರು. ಕುಶಲೋಪರಿ ಆದ

ಬಳಿಕ ಮನೆಯೊಡತಿ ಸಮಸ್ಯೆಯೊಂದನ್ನು ನಿವೇದಿಸಿಕೊಂಡರು. 'ಅಂಗಳದಲ್ಲಿ ಬೆಳೆದು ನಿಂತಿರುವ ಮಾದಳದ ಮರ ಧಾರಾಳ ಕಾಯಿಗಳನ್ನು ಬಿಟ್ಟಿದ್ದರೂ ಕೂಡ ಮಕ್ಕಳಿಗೆ ಒಂದೇ ಒಂದು ಹಣ್ಣು ಸಿಗುತ್ತಿಲ್ಲ, ಎಲ್ಲವನ್ನೂ ಅಳಿಲುಗಳು ಬಂದು ತಿಂದು ಹಾಕುತ್ತವೆ. ಇದೊಂದು ದೊಡ್ಡ ರಗಳೆಯಾಗಿ ಬಿಟ್ಟಿದೆ' ಎಂಬುದು ಅವರ ದೂರು. ಅಳಿಲುಗಳಿಂದ ಆಗುತ್ತಿರುವ ಅನ್ಯಾಯಕ್ಕೆ ಸ್ವಾಮಿಗಳು ಪರಿಹಾರ ಹೇಳಬೇಕು. ಇದು ಅವರ ಕಳಕಳಿಯ ಪ್ರಾರ್ಥನೆ.

ಅದಕ್ಕೆ ಸ್ವಾಮೀಜಿ ಹೇಳಿದ್ದಿಷ್ಟೇ "ಮರಗಿಡಗಳಿಂದಲ್ಲದೆ ಅಳಿಲುಗಳಿಗೆ ಬೇರೆಲ್ಲಿಂದ ಆಹಾರ ಸಿಗಬೇಕು. ಈ ಪ್ರಾಣಿಗಳಿಗೆ ನಮ್ಮ ಪ್ರೀತಿ ಮತ್ತು ಅನುಕಂಪವೇ ಆಸರೆ. ಆದರೂ ಒಮ್ಮೆ ನಾನು ಪರೀಕ್ಷಿಸಿ ನೋಡುತ್ತೇನೆ. ಒಂದು ತೆಂಗಿನ ಕಡ್ಡಿ ತನ್ನಿ".

ಮಕ್ಕಳು ಓಡಿಹೋಗಿ ಕಡ್ಡಿಯನ್ನು ತಂದರು. ಎಲ್ಲರೂ ಅಂಗಳದ ಮಾದಳದ ಮರದ ಕಡೆಗೆ ನಡೆದರು. ದಂಪತಿಯೊಂದಿಗೆ ಮಕ್ಕಳು ಉಳಿದವರು ಅಲ್ಲಿ ನೆರೆದರು.

ಸ್ವಾಮೀಜಿ ಆ ಮರದ ಬುಡದಲ್ಲಿ ನಿಂತು ನೆಲದಿಂದ ಒಂದು ಮೊಳ ಎತ್ತರದಲ್ಲಿ ಕಡ್ಡಿಯ ಮೂಲಕ ಒಂದು ಗೆರೆ ಬರೆದರು. ಆಮೇಲೆ ಒಂದು ವಿಚಿತ್ರ ಸ್ವರವನ್ನು ಹೊರಡಿಸಿದರು. ಆಗ ಗುಂಪು ಗುಂಪುಗಳಾಗಿ ಅಳಿಲುಗಳು ಹಾಯ್ದು ಬಂದವು. ಮರವನ್ನು ಏರತೊಡಗಿದವು. ಎಲ್ಲವೂ ಗೆರೆಯ ವರೆಗೆ ಹತ್ತಿದರೂ ಅಲ್ಲಿಂದ ಮೇಲಕ್ಕೇರಲಾಗದೆ ಸ್ತಬ್ಧವಾಗಿ ನಿಂತುಬಿಟ್ಟವು.

ಆಗ ಸ್ವಾಮೀಜಿ, 'ಮಕ್ಕಳೇ ಇವತ್ತಿನಿಂದ ನೀವು ಈ ಮಾದಳದ ಮರದಿಂದ ಹಣ್ಣುಗಳನ್ನು ತಿನ್ನಕೂಡದು. ಈ ಮನೆಯ ಯಜಮಾನರು ಅವರ ಮಕ್ಕಳಿಗಾಗಿ ಗಿಡ ನೆಟ್ಟು ಬೆಳೆಸಿದ್ದಾರೆ. ಕರುಣಾಳುಗಳಿರುವ ಬೇರೆ ಮನೆಗಳಿಗೆ ಹೋಗಿ ತಿಂದುಕೊಳ್ಳಿ' ಎಂದು ಹೇಳಿದರು. ಕೂಡಲೇ ಅಳಿಲುಗಳೆಲ್ಲ ಓಡಿ ಮರೆಯಾದುವು. ಅವುಗಳು ನೀಡುತ್ತಿದ್ದ ಉಪಟಳ ಅಂದಿಗೆ ಇಲ್ಲವಾಯಿತು! ಆ ದಿನ ಮಕ್ಕಳು ಕೂಗಿ ಕುಣಿದಾಡಿದರು. ಆದರೆ ದಂಪತಿಗಳ ಕಣ್ಣುಗಳಲ್ಲಿ ನೀರು ತುಂಬಿತು. ಅದು ಸಂತೋಷದಿಂದಲೋ ಅಥವಾ ಪಶ್ಚಾತ್ತಾಪದಿಂದಲೋ ಅಂತೂ ಸುರಿದ ಕಣ್ಣೀರು ಅವರ ಒಳಗಣ್ಣುಗಳನ್ನು ತೆರೆಸಿರಬೇಕು.

ಸ್ವಾಮೀಜಿ ಮಾವೇಲಿಕ್ಕರೆಯ ಆಂಡಿ ಪಿಳ್ಳೆ ಮೆಜಿಸ್ಟ್ರೇಟರ ಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಸಂದರ್ಭ. ಆಂಡಿ ಪಿಳ್ಳೆ ತಮ್ಮ ಸ್ವಂತ ಖರ್ಚಿನಲ್ಲಿ ಬೆಲೆಬಾಳುವ ಒಂದು ಕಸೂತಿಯ ಬಟ್ಟೆಯನ್ನು ಕೋಣೆಯ ಗೋಡೆಗೆ ತಾಗಿ ಇದ್ದ ಸರಿಗೆಯಲ್ಲಿ ನೇತುಹಾಕಿದ್ದರು. ರಾತ್ರಿ ಯಾವುದೋ ಇಲಿ ಅದರ ಕೆಲವು ಭಾಗಗಳನ್ನು ಕೊರೆದು ಹಾಳು ಮಾಡಿತ್ತು. ಹೀಗಾದ್ದನ್ನು ಪಿಳ್ಳೆ ಸ್ವಾಮೀಜಿಯವರಲ್ಲಿ ದೂರಿಕೊಂಡರು. ಅದಕ್ಕೆ ಸ್ವಾಮೀಜಿ "ಬಟ್ಟೆಗಳನ್ನು ಜಾಗರೂಕತೆಯಿಂದ ಇಟ್ಟುಕೊಳ್ಳಬೇಕು" ಎಂದಷ್ಟೇ ಹೇಳಿದರು. ಇಲಿಯ ಉಪಟಳಕ್ಕೆ ಪರಿಹಾರವಾಗಿ ಆ ರಾತ್ರಿ ಒಂದು ಒಳ್ಳೆಯ ಉಪಾಯವನ್ನೂ ಕೈಗೊಂಡರು. 'ದೇವಾಲಯದಿಂದ ಪ್ರಸಾದವಾಗಿ ಸಿಕ್ಕುವ ಅಪ್ಪಗಳನ್ನು ತಂದುಕೊಡು' ಎಂದು ಕೆಲಸದವನಲ್ಲಿ

ಹೇಳಿದರು. ತಂದ ಮೇಲೆ ಎಲ್ಲವನ್ನು ಹುಡಿ ಹುಡಿ ಮಾಡಿ ಕೋಣೆಯ ಕೆಲವೆಡೆ ಹಾಕಿದರು. ಆಮೇಲೆ ಮೇಲೆ ನೋಡಿ "ಮಕ್ಕಳೇ ಬನ್ನಿ, ತಿಂಡಿ ತಿನ್ನಿ" ಎಂದು ಚಪ್ಪಾಳೆ ತಟ್ಟಿ ಕರೆದರು. ಒಂದು ಸಣ್ಣ ವಿಚಿತ್ರ ಸ್ವರವನ್ನು ಹೊರಡಿಸುತ್ತ ಮತ್ತೊಮ್ಮೆ ಕರೆದರು. ಕ್ಷಣ ಕಳೆದು ಅನೇಕ ಇಲಿಗಳು ಧಾವಿಸಿ ಬಂದು ಎಲ್ಲವನ್ನು ಸಾವಧಾನದಿಂದ ಮುಕ್ಕತೊಡಗಿದವು. ಎಲ್ಲವೂ ಖಾಲಿಯಾದಾಗ ಸ್ವಾಮೀಜಿ ಹೇಳಿದರು "ನೀವು ಬೆಲೆಬಾಳುವ ಬಟ್ಟೆಯನ್ನು ಹಾಳು ಮಾಡಿ ಬಿಟ್ಟಿದ್ದೀರಿ. ಇನ್ನು ಮುಂದೆ ಆಂಡಿ ಪಿಳ್ಳೆಯವರಿಗೆ ಇಂತಹ ತೊಂದರೆ ನೀಡಬಾರದು" ಎಂದು ಎಚ್ಚರಿಸಿದರು.

ಸ್ವಾಮೀಜಿಯ ಅರಿಕೆಯನ್ನು ಕೇಳಿಸಿಕೊಂಡ ತಕ್ಷಣ ಇಲಿಗಳು ಅನೇಕ ದಾರಿಗಳಲ್ಲಿ ಓಡಿ ಮರೆಯಾದುವು. ಮತ್ತೆ ಆ ಮನೆಯಲ್ಲಿ ಇಲಿಗಳ ಉಪಟಳ ಇರಲಿಲ್ಲ. ಈ ಘಟನೆಯನ್ನು ಮಾವೇಲಿಕ್ಕರ ಶ್ರೀ ಕೃಷ್ಣ ಪಿಳ್ಳೆ ತನ್ನ ಲೇಖನದಲ್ಲಿ ನೆನಪಿಸಿಕೊಂಡಿದ್ದರಿಂದ ಗೊತ್ತಾಗಿದೆ.

ಇಲಿಗಳ ಹಾಗೂ ಸ್ವಾಮಿಗಳೊಳಗಿನ ಪರಸ್ಪರ ಸಂಬಂಧದ ಬಗ್ಗೆ ಇನ್ನೂ ಅನೇಕ ಕಥೆಗಳಿವೆ. ಹಾಗೆಯೇ ಕಾಗೆಗಳು, ಅಳಿಲುಗಳು, ಗುಬ್ಬಚ್ಚಿಯಂತಹ ಹಕ್ಕಿಗಳು, ಹಾತೆಗಳು, ಇರುವೆಗಳು, ಹಾವುಗಳು ಮುಂತಾಗಿ ಅನೇಕ ಸಾಧು ಪ್ರಾಣಿಗಳು ಅವರ ಅಭಿಪ್ರಾಯವನ್ನು ಶಿರಸಾವಹಿಸುತ್ತಿದ್ದುದಕ್ಕೆ ಅನೇಕ ಉದಾಹರಣೆಗಳಿವೆ. ಒಂದರ್ಥದಲ್ಲಿ ಇಂತಹ ಕಾರಣಗಳಿಂದಾಗಿಯೇ ಸ್ವಾಮೀಜಿಯವರ ವ್ಯಕ್ತಿತ್ವ ಹೆಚ್ಚು ಬೆಲೆಬಾಳುತ್ತದೆ. ಘಟನೆಗಳ ಹಿಂದೆ ಚರಾಚರಗಳಲ್ಲಿ ಬ್ರಹ್ಮವನ್ನು ಗುರುತಿಸಿ ಸಾಕ್ಷಾತ್ಕರಿಸಿಕೊಳ್ಳುವ ಬ್ರಹ್ಮಜ್ಞಾನಿಯ ವ್ಯಕ್ತಿತ್ವ ಎದ್ದು ಕಾಣುತ್ತದೆ. ಇಷ್ಟಕ್ಕೂ ಇಲ್ಲಿ ಉಲ್ಲೇಖಗೊಂಡಿರುವ ಅವರ ಸಿದ್ಧಿ ಕಥೆಗಳು ಕೆಲವೇ ಕೆಲವು ಮಾತ್ರ ಎಂದು ಗ್ರಹಿಸಬೇಕು.

ಸ್ವಾಮೀಜಿಯವರ ಆಧ್ಯಾತ್ಮಿಕ ವ್ಯಕ್ತಿತ್ವ ದರ್ಶನಕ್ಕೂ ಭಾಗ್ಯ ಬೇಕು. ಪ್ರಪಂಚವನ್ನೇ ತನ್ನಲ್ಲಿ, ತನ್ನನ್ನು ಪ್ರಪಂಚದಲ್ಲಿಯೂ, ಜೊತೆಗೆ ತನ್ನಲ್ಲೆ ದೇವರನ್ನೂ, ಪ್ರಪಂಚವನ್ನೂ ಎಲ್ಲದರಲ್ಲೂ ಎಲ್ಲವನ್ನೂ ಕಾಣುವ ದೈವಿಕ ಪ್ರಭಾವ ಇರುವಂತಹ ಅವತಾರ ಅವರದಾಗಿತ್ತೆನ್ನಬಹುದು. ಹಾಗೇ ಅವರನ್ನು ಸುಲಭವಾಗಿ ಅರ್ಥೈಸಿಕೊಳ್ಳುವಂತಿಲ್ಲ. ಪ್ಲಾಸ್ಟಿಕ್ ಹೂವುಗಳ ರಾಶಿಯಿಂದ ನೈಜ ಪುಷ್ಪವನ್ನು ಆಯುವಂತೆ ನಾವು ಸ್ವಾಮಿ ತಿರುವಡಿಗಳನ್ನು ದರ್ಶಿಸಬೇಕಾದ್ದಿದೆ.

## ಅರುಪತ್ತರ ಹುಟ್ಟುಹಬ್ಬ

ವಡಿವೀಶ್ವರದಲ್ಲಿ ಜ್ಞಾನೋದಯ ವಾದಂದಿನಿಂದ ಮಹಾಸಮಾಧಿಯ ವರೆಗೆ ಶ್ರೀ ಚಟ್ಟಂಬಿ ಸ್ವಾಮಿಗಳು ಕೇರಳದ ಸಾಮಾಜಿಕ, ಸಾಂಸ್ಕೃತಿಕ, ಮತ್ತು ಆಧ್ಯಾತ್ಮಿಕ ಬದುಕಿನ ಒಂದು ಭಾಗವಾಗಿದ್ದರೆನ್ನಬಹುದು. ಆ ನಾಲ್ಕು ದಶಕಗಳಲ್ಲಿ ಸಾಮಾಜಿಕ ಅಸಮತೆಗಳಿಗೆ ಪರಿಹಾರ ಕಾಣುವತ್ತ ಸ್ವಾಮೀಜಿ ಕೊಟ್ಟ ಪ್ರೇರಣೆ ಸಾಮಾನ್ಯವಾದುದಲ್ಲ. ಜೀವದಯೆಗೆ

ಅವರು ಎಲ್ಲೆಡೆ ಮಾನ್ಯತೆಯನ್ನು ಗಳಿಸಿ ಕೊಟ್ಟರು. ಈ ಮೂಲಕ ಅವರು ಧರ್ಮ ಸಂಸ್ಥಾಪನೆಗೆ ಸಮನಾದ ಸಾಹಸವನ್ನು ತೋರಿದರು. ಪ್ರೀತಿಯಿಂದ ಅಧರ್ಮವನ್ನೂ ಕಾಣುವ ಅವರ ಮೌನ ಸಾಧನೆ ಅದ್ವಿತೀಯ.

ಅವರು ಜ್ಞಾನ ಸಂಪಾದನೆಗಾಗಿ ತೋರಿದ ದಾರಿಯನ್ನು ತೀರ್ಥಪಾದ ಸಂಪ್ರದಾಯ ಎಂದು ತಿಳಿಯಲಾಗಿದೆ. ಇದರಲ್ಲಿ ವೇದಾಂತ ಹಾಗೂ ಸಿದ್ಧಾಂತಗಳ ಸಮನ್ವಯ ಇದೆ. 1913 ರಲ್ಲಿ ಅಂದರೆ ಕೊಲ್ಲ ವರ್ಷ 1089 ರ ಅಗೋಸ್ತು ತಿಂಗಳು ಬಂತು. ಭರಣಿ ನಕ್ಷತ್ರ ಬಂದರೆ ಸ್ವಾಮಿಗಳಿಗೆ 60 ವರ್ಷ. ಅವರ ಮೂರನೇ ಶಿಷ್ಯನಾದ ತೀರ್ಥಪಾದ ಪರಮಹಂಸರ ಅವಿರತ ಶ್ರಮದಿಂದಾಗಿ ತಿರುವಳ್ಳಾದ ಎಳುಮಾಟ್ಟೂರಿನಲ್ಲಿ ತಿರುವಡಿಗಳ ಹೆಸರಿನಲ್ಲಿ ಒಂದು ಆಶ್ರಮ ಸ್ಥಾಪಿತವಾಗಿತ್ತು. ಅಲ್ಲಿನ ಒಂದು ರಾಜಮನೆತನದವರು ಕಟ್ಟಡವನ್ನೂ ಸ್ಥಳವನ್ನೂ ದಾನವಾಗಿ ಕೊಟ್ಟಿದ್ದರು. ಆದಕ್ಕೆ ಶ್ರೀ ವಿದ್ಯಾಧಿರಾಜ ತೀರ್ಥಪಾದ ಪರಮಭಟ್ಟಾರಾಶ್ರಮ ಎಂದು ಹೆಸರು. ದ್ವಿತೀಯ ಹಾಗೂ ತೃತೀಯ ಸನ್ಯಾಸಿ ಶಿಷ್ಯರು ಕೆಲವು ಕಾಲ ಅಲ್ಲಿ ಗುರುವಿನ ಶುಶ್ರೂಷೆಯಲ್ಲಿ ಕಳೆದಿದ್ದರು. ಆದರೆ ಒಂದೇ ಕಡೆ ವಾಸ ಮಾಡುವ ಕ್ರಮ ಚಟ್ಟಂಬಿ ಅವರದಲ್ಲ. ಅಲ್ಲಿ ಆರೇ ತಿಂಗಳು ಉಳಕೊಂಡದ್ದು. ಆ ಸಂದರ್ಭದ ಘಟನೆಗಳು ಮಾತ್ರ ದೊಡ್ಡದೊಂದು ಗ್ರಂಥ ರಚನೆಗೆ ಸಾಕಾಗುವಷ್ಟಿವೆ.

ತನ್ನ ಎರಡನೇ ಶಿಷ್ಯನಾದ ನೀಲಕಂಠ ತೀರ್ಥಪಾದರ ಸಮಾಧಿ ವೇಳೆಯಲ್ಲಿ ಸಹಕರಿಸಿದ ಚಟ್ಟಂಬಿ ಸ್ವಾಮೀಜಿ ಅಲ್ಲಿ ಒಂದು ಶಿವ ಪ್ರತಿಷ್ಠೆಯನ್ನೂ ನಡೆಸಿದ್ದರು.

ಸ್ವಾಮಿ ತಿರುವಡಿಗಳು ತಮ್ಮ ತಿರುಗಾಟವನ್ನು ಎಂದೂ ಕಡಿಮೆ ಮಾಡಲಿಲ್ಲ. ವೇದಾಂತ ತತ್ವಗಳನ್ನು ಸಾಮಾನ್ಯ ಜನರತ್ತ ತಲುಪಿಸುವುದಕ್ಕಾಗಿ ಆ ಕಾಲದಲ್ಲಿ ಚೆನ್ನಾಗಿಯೇ ದುಡಿಯಬೇಕಾಗಿತ್ತು. ಹಾಗಾಗಿ ಸ್ವಾಮೀಜಿ ಅಂತಹ ಅನೇಕ ಗ್ರಂಥಗಳನ್ನು ಬರೆದರು. ತುಂಬ ಕಳೆದು ಹೋದರೂ ಬರೆದವುಗಳಲ್ಲಿ ಕೆಲವಾದರೂ ಸಿಕ್ಕಿವೆ.

ಶಿಷ್ಯರೂ ಅಭಿಮಾನಿಗಳೂ ದೇಶದ ಅನೇಕ ಭಾಗಗಳಿಂದ ಬಂದು ಅವರಿಂದ ಆಶೀರ್ವಾದ ಪಡೆದರು. ಅವರೆಲ್ಲರ ಪ್ರೀತ್ಯಾದರ ಭಕ್ತಿಗಳಿಗೆ ಪಾತ್ರರಾದ ಸ್ವಾಮೀಜಿ ಕೃತಾರ್ಥರೆನಿಸಿದರು. ಸಮಾಜದ ವಿವಿಧ ವರ್ಗಗಳಲ್ಲಿನ ಬಡವರ, ಶ್ರೀಮಂತರ, ಉದ್ಯೋಗಸ್ಥರ, ಅಧಿಕಾರಿಗಳ ಜೊತೆ ಶ್ರೀಗಳು ವ್ಯವಹರಿಸಿದ್ದರು. ಗ್ರಾಮಸಂಚಾರ ಮಾಡುತ್ತಾ ಸಂಗೀತದಂತಹ ಕಲೆಗಳಿಗೂ, ಕಲಾಸಕ್ತರಿಗೂ, ಪ್ರಚೋದನೆ ನೀಡಿದರು. ಹಾಗೆ ಷಷ್ಠಿಪೂರ್ತಿಯ ನಂತರ ಕೂಡ ಅವರ ಕುರಿತಾದ ಅದ್ಭುತ ಕಥೆಗಳು ಎಲ್ಲೆಡೆ ಪ್ರಚಾರದಲ್ಲಿದ್ದವು.

# ಮಹಾ ಸಮಾಧಿ

ಕೊಲ್ಲಂ ಜಿಲ್ಲೆಯ ಪನ್ಮನದಲ್ಲಿ 1924 ಮೇ 15 ನೇ ದಿನಾಂಕ ಚಟ್ಟಂಬಿ ಸ್ವಾಮಿಗಳು ಮಹಾ ಸಮಾಧಿಗೆ ಸಂದರು. ಶ್ರೀ ಕುಂಬಳತ್ತ್ ಶಂಕು ಪಿಳ್ಳೆ ಸ್ವಾಮಿ ತಿರುವಡಿಗಳನ್ನು ಕೊನೆಯ ದಿನಗಳಲ್ಲಿ ಶುಶ್ರೂಷೆ ಮಾಡಿ ಧನ್ಯರಾದರು. ಯೋಗಚರ್ಯೆಗಳಿಂದ ಪರಿಶುದ್ಧರಾದ ಸ್ವಾಮೀಜಿಯನ್ನು ಸಮಾಧಿಯಲ್ಲಿ ಸ್ಥಾಪಿಸುವುದಕ್ಕೂ ಮೇಲ್ಗಡೆ ಶಿವಲಿಂಗವನ್ನು ಪ್ರತಿಷ್ಠೆ ಮಾಡಿ ಬಾಲ ಭಟ್ಟಾರಕೇಶ್ವರ ಕ್ಷೇತ್ರವನ್ನು ನಿರ್ಮಿಸಿ ಆಚಂದ್ರಾರ್ಕ ಕೀರ್ತಿಯನ್ನು ಗಳಿಸುವುದಕ್ಕೂ ಸಾಧ್ಯವಾಯಿತು. ಅದರ ಹಿನ್ನೆಲೆ ಹೀಗಿದೆ –

ಸ್ವಾಮಿ ತಿರುವಡಿಗಳು ಕೊಲ್ಲಂನ ಅಂಬಲಪುಳ ಕೃಷ್ಣ ಪಿಳ್ಳೆಯ ಮನೆಯಲ್ಲಿ ತಂಗಿರುವ ವಿಷಯವನ್ನು ತಿಳಿದ ಶ್ರೀ ಕುಂಬಳಂ ಭೇಟಿಯಾಗುವುದಕ್ಕೆಂದು ಹೋದರು. ಜೊತೆಗೆ ಕೆಲವು ಸ್ನೇಹಿತರೂ ಇದ್ದರು. ಬಹಳ ಹೊತ್ತು ಸಂಭಾಷಣೆ ನಡೆಯಿತು. ಸ್ವಾಮೀಜಿ ಕುಸ್ತಿಗೆ ಸಂಬಂಧಿಸಿದ ಅನೇಕ ಪಟ್ಟುಗಳ ಕುರಿತೂ ವಿವರಿಸಿದರು. ಕುಂಬಳಂ ಸ್ವಾಮೀಜಿಯನ್ನು ತನ್ನ ಮನೆಗೆ ಬರುವಂತೆ ಆಹ್ವಾನಿಸಿದರು. ಆದರೆ ಆ ಸಲ ಹೊರಡುವುದಕ್ಕೇ ಆಗಲಿಲ್ಲ. ಕೆಲವು ವರ್ಷಗಳೇ ತಿರುವಡಿಗಳು ಕರುನಾಗಪಳ್ಳಿಗೆ ಬಂದ ವಿಷಯ ತಿಳಿದು ಕುಂಬಳಂ ಇನ್ನೊಮ್ಮೆ ಭೇಟಿಯಾದರು. "ಬರಬೇಡ ಎಂದರೂ ಬಂದೇನು" ಎಂದು ಸ್ವಾಮೀಜಿ ತಮಾಷೆಯಾಗಿ ಹೇಳಿದರು. ಮತ್ತೂ ಎರಡು ತಿಂಗಳು ಕಳೆಯಿತು. ಶ್ರೀ ಕುಂಬಳಂ ಅವರ ಮನೆಯ ಹತ್ತಿರದ ಒಂದು ಬನದ ದೇವಿ ಗುಡಿಯ ಸಮೀಪ ಸ್ವಾಮೀಜಿ ವಿಶ್ರಮಿಸಬೇಕಾಯಿತು.

ಆ ದಿನಗಳಲ್ಲಿ ಜನರು ದೇಶದ ನಾನಾ ಕಡೆಗಳಿಂದ ಬಂದು ಸ್ವಾಮೀಜಿಯನ್ನು ಭೇಟಿಯಾಗುತ್ತಿದ್ದರು. ಪಂಡಿತರು, ಕಲಾವಿದರು, ಸಾಹಿತಿಗಳು, ರೋಗಿಗಳು, ಮಹಿಳೆಯರು, ಮಕ್ಕಳೆನ್ನದೆ ಸಂದರ್ಶಿಸುತ್ತಿದ್ದರು. ಸ್ವಾಮೀಜಿ ಎಲ್ಲರೊಂದಿಗೆ ಆತ್ಮೀಯವಾಗಿ ಬೆರೆತರು.

ಮನುಷ್ಯರಷ್ಟೇ ಅಲ್ಲ, ಅಳಿಲು, ಕಪ್ಪೆ, ಕೇರೆ, ಇರುವೆ, ವಿವಿಧ ಹಾವುಗಳೇ ಮೊದಲಾದ ಜೀವಿಗಳೂ ಆ ಪರಿಸರದಲ್ಲಿ ಅವರ ಮಕ್ಕಳಂತೆ ಸುತ್ತಾಡುತ್ತಿದ್ದುದನ್ನು ಕಂಡ ಜನರು ಆಶ್ಚರ್ಯಭರಿತರಾದರು. ಅವರು ಹಗಲು ಹೊತ್ತು ವಿಶ್ರಮಿಸುತ್ತಿದ್ದ ಗುಡಿಯ ಪೂರ್ವಭಾಗದಲ್ಲಿ ಇನ್ನೊಂದು ಗುಡಿಯಿತ್ತು. "ಒಮ್ಮೆ ಆ ಕಾವನ್ನು ನೋಡಿ ಬರೋಣ" ಎಂದು ಅವರು ಒಂದು ದಿನ ಹೇಳಿದರು. ಮರುದಿನ ಬೆಳಗಾತ ಅಲ್ಲಿಗೂ ಹೋದದ್ದಾಯಿತು. "ಇದು ತುಂಬ ಪುರಾತನವೂ ಪರಿಶುದ್ಧವೂ ಆದ ಗುಡಿ". "ಸಮಾಧಿ ಪೀಠ" ಇಲ್ಲೇ ಆದರೆ ಒಳಿತು. ಎಂದು ಅವರು ಶ್ರೀ ಕುಂಬಳತ್ತ್ ಅವರಲ್ಲಿ ಹೇಳಿದರು. ಕೆಲವು ದಿನ ಕಳೆದ ಮೇಲೆ ಅವರು "ಎಲ್ಲರಿಗೂ ವಿದಾಯ ಕೋರಿ ಬರುತ್ತೇನೆ" ಎಂದು ತಿರುವನಂತಪುರಕ್ಕೆ

ಹೊರಡುತ್ತ ಕಿರಿಯನಾದ ಕುಂಬಳಂ ಅವರಲ್ಲಿ ಆತ್ಮೀಯವಾಗಿ ಹೇಳಿದರು. "ಮಾವಾ ಮುದುಕ ಸಾಯುವುದಕ್ಕೆ ಇಲ್ಲಿಗೇ ಬರುತ್ತಾನೆ!"

ತಿರುವನಂತಪುರಕ್ಕೆ ತಲುಪಿದ ಕೆಲವೇ ದಿನಗಳಲ್ಲಿ ಅವರು ಹೊಟ್ಟೆಗೆ ಸಂಬಂಧಿಸಿದ ಯಾವುದೋ ರೋಗದಿಂದ ಬಳಲತೊಡಗಿದರು. ಯಾವ ಚಿಕಿತ್ಸೆಯೂ ಫಲಕಾರಿಯಾಗಲಿಲ್ಲ.

ತಾನು ಪನ್ಮನಕ್ಕೆ ಬರಬೇಕೆಂದಿರುವ ವಿಚಾರವನ್ನು ಉಲ್ಲೇಖಿಸಿ ಶ್ರೀ ಕುಂಬಳಂರಿಗೆ ಒಂದು ಪತ್ರ ಬರೆದರು. ಹಾಗೆ ಕುಂಬಳಂ ತಿರುವನಂತಪುರಕ್ಕೆ ಧಾವಿಸಿದರು. ಅಲ್ಲಿ ನೆರೆದಿದ್ದ ಶಿಷ್ಯರು, ಭಕ್ತರು, ಹೆಸರಾಂತ ವೈದ್ಯವೃಂದ, ಜನಸಾಮಾನ್ಯರೆಲ್ಲರಿಂದಲೂ ಬೀಳ್ಕೊಟ್ಟು ಕೊಂಡು ಬೋಟಿನ ಮೂಲಕ ಮೊದಲು ಪ್ರಾಕ್ಕುಳಕ್ಕೆ ಬಂದು ಅಲ್ಲಿ ಕೆಲವು ದಿನ ವಿಶ್ರಮಿಸಿದರು. ಮೊದಲ ಮತ್ತು ಕೊನೆಯ ಶಿಷ್ಯರು ಅಲ್ಲಿಗೆ ಬಂದು ಸ್ವಾಮೀಜಿಯ ಭೇಟಿ ಮಾಡಿದರು. ಅವರ ನಡುವೆ ಕುಳಿತು ಫೋಟೊ ತೆಗೆಯುವುದಕ್ಕೂ ಸಹಕರಿಸಿದರು.

ಕೆಲವು ದಿನಗಳು ಕಳೆದ ಮೇಲೆ ಅವರು ಹೇಳಿದ್ದಿಷ್ಟೆ : "ಇನ್ನು ಪನ್ಮನಕ್ಕೆ ಹಿಂತಿರುಗಿದ ಮೇಲೆ ಮಾತ್ರ ಔಷಧ ಸೇವಿಸುತ್ತೇನೆ" ಹಾಗಾಗಿ ಆ ರಾತ್ರಿಯೇ 'ದೋಣಿ ಪ್ರಯಾಣ'ದ ಮೂಲಕ ಅವರನ್ನು ಪನ್ಮನಕ್ಕೆ ತರಲಾಯಿತು. ನಡುವೆ ಕೊಲ್ಲಂ ಆದಿನಾಡು ಹಾಗೂ ತಿರುವನಂತಪುರಂಗಳಿಂದ ಕೆಲವು ಭಕ್ತರು ಬಂದು ತಂತಮ್ಮ ಊರುಗಳಿಗೆ ಬರುವಂತೆ ಕೋರಿಕೊಂಡರು. ಆದರೆ ಯಾವುದಕ್ಕೂ ಜಗ್ಗದ ಸ್ವಾಮೀಜಿ "ಎಷ್ಟಕ್ಕೂ ಮೇಷ ಇಪ್ಪತ್ತಮೂರು ಕಳೆಯಲಿ ಆ ಮೇಲೆ ತೆಂಕುಭಾಗಕ್ಕೆ ಪ್ರಯಾಣ ಮಾಡೋಣ" ಎಂದು ಬಿಟ್ಟರು. ಆ ದಿನ ಯಾರಿಗೂ ಆ ಮಾತಿನ ಅರ್ಥ ಹೊಳೆಯಲಿಲ್ಲ.

ಭಕ್ತರ ಹಾಗೂ ಶಿಷ್ಯ ಸಮೂಹದ ಔಷಧೋಪಚಾರಗಳ ನಡುವೆ ಮೇಷ 22 ರಂದು ಸ್ವಾಮೀಜಿ ಕುಂಬಳಂ ಅವರನ್ನು ಸನಿಹಕ್ಕೆ ಕರೆದು, "ಎಲ್ಲೂ ಹೋಗಬೇಡ. ಇವತ್ತು ಯಾರಿಗೆಲ್ಲ ಪತ್ರ ಬರೆಯಬೇಕು ಹೇಳು" ಎಂದು ಹೇಳಿದರು. ಮರುದಿನವೇ ಅಂದರೆ ಮೇಷ ಮಾಸ 23 ನೇ ದಿನಾಂಕ 1924 ನೇ ಇಸವಿಯಲ್ಲಿ ಶ್ರೀ ಚಟ್ಟಂಬಿ ಸ್ವಾಮಿ ತಿರುವಡಿಗಳು ಪನ್ಮನ ಪ್ರಾಕ್ಕುಳಂ ಸಿ. ಪದ್ಮನಾಭಪಿಳ್ಳೆ ಸ್ಮಾರಕ ವಾಚನಾಲಯದಲ್ಲಿ ದಿವ್ಯ ಸಮಾಧಿಯ ಮೂಲಕ ಮೋಕ್ಷವನ್ನು ಹೊಂದಿದರು.

ಹಿಂದೆಯೇ ಪ್ರಸ್ತಾಪಿಸಿದಂತೆ ಆ ಪುಣ್ಯ ಶರೀರವನ್ನು ಗುಡಿಯ ಮುಂದೆ ಸಮಾಧಿಯಲ್ಲಿ ವಿಧಿಪೂರ್ವಕ ಕುಳ್ಳಿರಿಸಲಾಯಿತು. ಆ ಸಮಾಧಿ ಪೀಠದಲ್ಲಿ ಶ್ರೀ ಬಾಲ ಭಟ್ಟಾರಕೇಶ್ವರ ಕ್ಷೇತ್ರ ಹಾಗೂ ಪನ್ಮನ ಆಶ್ರಮವನ್ನು ಸ್ಥಾಪಿಸಲಾಯಿತು. ಶ್ರೀ ಕುಂಬಳಂ ಈ ಕುರಿತು ಹೀಗೆ ಬರೆದಿದ್ದಾರೆ –

ಮಹಾಸಾಗರವೊಂದರ ಸಂಗಮ ಸ್ಥಳದಲ್ಲಿ ಬಿದ್ದುಕೊಂಡು ಈಜಾಡುವ ಬಾಲಕನಂತೆ ನಾನು ಅವರ ಕುರಿತು ಅರಿತುಕೊಂಡೆ. ಮುಂದೆಯೂ ನಾನು ತಿಳಿದದ್ದೆಂದರೆ ಅವರನ್ನು ಪೂರ್ತಿ ಅರ್ಥಮಾಡಿಕೊಳ್ಳುವುದಕ್ಕೆ ಯಾರಿಂದಲೂ ಸಾಧ್ಯವಾಗಿಲ್ಲ ಎಂಬುದಷ್ಟೆ. ಚಟ್ಟಂಬಿ ಸ್ವಾಮಿ ಅಂತಹ ತೇಜೋಮೂರ್ತಿ.

ಕೇರಳದ ನವಯುಗ ಶಿಲ್ಪಿಯಾದ ಈ ಅದ್ಭುತ ಚೇತನಕ್ಕೆ ಶತಕೋಟಿ ನಮಸ್ಕಾರ! **ಮಹೇಶ್ವರಾವತಾರಿ ಪರಮಭಟ್ಟಾರಕ ವಿದ್ಯಾಧಿರಾಜ ತೀರ್ಥಪಾದ ಚಟ್ಟಂಬಿ ಸ್ವಾಮಿ ತಿರುವಡಿಗಳಿಗೆ** ಸಹಸ್ರ ಕೋಟಿ ನಮಸ್ಕಾರ!

ದೇವರ ಈ ಹಿಂದಿನ ಅವತಾರಗಳ ಸಂದೇಶವನ್ನೆಲ್ಲ ಪ್ರೀತಿ ಮತ್ತು ಕರುಣೆಗಳಲ್ಲಿ ಅಡಕಗೊಳಿಸಿದ ಮಹಾನುಭಾವರಿಗೆ ನನ್ನ ಅನಂತ ಕೋಟಿ ನಮಸ್ಕಾರ!!!



**ಮಹಾ ಸಮಾಧಿ**

★★★

## ಜನನ ಪತ್ರಿಕೆ

| | | | | | |
|---|---|---|---|---|---|
| ಶನಿ | | ಚಂದ್ರ | ರಾಹು | ಕುಜ | ಲಗ್ನ |
| ಶುಕ್ರ | | ಶ್ರೀ | | | ರವಿ |
| ಕೇತು | | | | ರವಿ | |
| | ಲಗ್ನ | ಗುರು | ಗುಳಿಗ | ಶುಕ್ರ | |

1854 ಸಿಂಹ ಮಾಸ 11 ನೇ ತಾರೀಕು ಗುರುವಾರ ಭರಣಿ

ನಾಲ್ಕನೇ ಪಾದ ಅಪರ ಪಕ್ಷ ಸಪ್ತಮಿ, ಉದಯಾದಿ 20 – 15

– ಧನುರ್ಲಗ್ನ ಪ್ರಥಮ ದ್ರೇಕ್ಕಾಣ

---

## ಮಹಾ ಸಮಾಧಿ ಪತ್ರಿಕೆ

| | | | |
|---|---|---|---|
| | ರವಿ ಬು (ವ) | ಚ | ಶು |
| ಶ | ಶ್ರೀ | | |
| ಕು | | | ಸ |
| | ಗು | ಮ | ಲ ಮಾ |

1924 ಮೇಷ 23 ಸೋಮವಾರ ಕಾರ್ತಿಕ, ಶುಕ್ಲಪಕ್ಷ

ದ್ವಿತೀಯ ಕನ್ಯಾರಾಶಿಯಲ್ಲಿ ಮಹಾ ಸಮಾಧಿ

# ಅನುಬಂಧ

ಸ್ವಾಮೀಜಿಯವರ ಷಷ್ಠ್ಯಿಪೂರ್ತಿಯ ವೇಳೆ ಅವರ ಸಮಕಾಲೀನರಾಗಿದ್ದ ಅನೇಕ ಹಿರಿಯ ಕವಿಗಳು ಒಗ್ಗೂಡಿ ಷಷ್ಠ್ಯಿಪೂರ್ತಿ ಪ್ರಶಸ್ತಿ ಎಂಬ ಸಂಕಲನವನ್ನು ಪ್ರಕಟಿಸಿದರು. ಸ್ವಾಮೀಜಿಗಳು ಅನೇಕ ಸಾಹಿತಿಗಳ ಸಂಪರ್ಕದಲ್ಲಿದ್ದರೆಂಬುದಕ್ಕೆ ಇದು ಸಾಕ್ಷಿ. ಶಿಶು, ಬಾಲನ್, ಪಾಣಿಂಧಯನ್, ಅರ್ಭನ್, ಅರ್ಭಕನ್, ತೀರ್ಥಪಾದನ್, ಪರಮಭಟ್ಟಾರಕನ್ ಮುಂತಾದ ಅಂಕಿತಗಳಿಂದ ಸ್ವಾಮೀಜಿಯನ್ನು ವಿವಿಧ ಸಾಹಿತಿಗಳು ಕೃತಿಗಳುದ್ದಕ್ಕೂ ಸಂಬೋಧಿಸಿದ್ದಾರೆ.

## ಹೆಜ್ಜೆ ಗುರುತುಗಳು

1854 : ಜನನ, ತಾಯಿ ನಜ್ಜಮ್ಮ ಪಿಳ್ಳೆ, ತಂದೆ ವಾಸುದೇವ ಶರ್ಮ
(ಉಳ್ಳೂರ್ ಅವರ ಅಭಿಪ್ರಾಯದಂತೆ ತಂದೆ ಅನಂತ ಶರ್ಮ)

1864 – ಬಾಲ್ಯದಲ್ಲಿ ಶಿಕ್ಷಣ, ಮರವೆಯನ್ನು ತೊಡೆದು ಹಾಕುತ್ತಿದ್ದೇನೆ ಎಂಬ ಉತ್ತರ ನೀಡಿದ ಸಂದರ್ಭ

1871 – ರಾಮನ್ ಪಿಳ್ಳೆ ಆಶಾನ್ ಅವರ ಶಾಲೆಯಲ್ಲಿ ಶಿಕ್ಷಣ. ಚಟ್ಟಂಬಿ ಸ್ಥಾನ. ಬಾಲ ಸುಬ್ರಹ್ಮಣ್ಯ ಮಂತ್ರೋಪದೇಶ ಪಡೆದ ಕಾಲಘಟ್ಟ.

1875 – ತನಕ ನೈಯ್ಯಾಟ್ಟಿಂಗರ ರಿಜಿಸ್ಟ್ರಾರ್ ಕಛೇರಿಯಲ್ಲಿ ದಸ್ತಾವೇಜು ಬರಹಗಾರನ ಕೆಲಸ. ಅದೇ ಉದ್ಯೋಗ ಮತ್ತೆ ಭೂತಪಾಂಡಿಯಲ್ಲಿ, ನಂತರ ತಿರುವನಂತಪುರಕ್ಕೆ.

1880 – ತನಕ ಸ್ವಾಮಿನಾಥ್ ದೇಶಿಕನ್ ಎಂಬ ತಮಿಳು ವಿದ್ವಾಂಸನ ಪರಿಚಯವಾದದ್ದು. ಸುಬ್ಬಾ ಜಟಾಪಾಠಿಗಳೊಂದಿಗೆ ಮಿಲನ. ಕಲ್ಲಡಕ್ಕುರಿಗೆ – ದಕ್ಷಿಣ ಭಾರತ ಸಂಚಾರ. ಆತ್ಮಾನಂದ ಸ್ವಾಮಿಗಳ ಸಂಪರ್ಕ –ಯೋಗಾರೂಢತೆ.

1885 – ತನಕ ತಿರುವನಂತಪುರದ ಕಲ್ಲುಮನೆಯ ಸಂಪರ್ಕದಲ್ಲಿ. ವಾಮನಪುರ ಮುಂತಾದೆಡೆ ಸಂಚಾರ, ವಡಿವೀಶ್ವರದಲ್ಲಿ ಬ್ರಹ್ಮಜ್ಞಾನ ಪಡೆದದ್ದು. 1883ರಲ್ಲಿ ಪ್ರಥಮ ಶಿಷ್ಯನಾಗಿ ನಾಣುಗುರು. ಅರುವಿಕ್ಕರದಲ್ಲಿ ಜೊತೆಯಾಗಿ ವಾಸ.

1890 – ತನಕ ಬಡಗು ತಿರುವಿದಾಂಕೂರಿಗೆ ಏಟ್ಟುಮಾನೂರು, ಮೂವಾಟ್ಟುಪುಳ, ವೈಕ್ಕಂ, ಎರ್ನಾಕುಳಂನಲ್ಲಿ ವಿವೇಕಾನಂದರ ಭೇಟಿ. ನೀಲಕಂಠ ತೀರ್ಥಪಾದರನ್ನು ಶಿಷ್ಯನಾಗಿ ಸ್ವೀಕರಿಸಿದ್ದು. ಕ್ರಿಸ್ತುಮತಚ್ಛೇದನಂ ಎಂಬ ಗ್ರಂಥದ ರಚನೆ

1914 – ವರೆಗೆ ನವೋತ್ಥಾನ ಕಾರ್ಯಕ್ರಮಗಳು. ವೇದಾಧಿಕಾರ ನಿರೂಪಣಂ ಎಂಬ ಕೃತಿ ರಚನೆ. ತೀರ್ಥಪಾದ ಪರಮಹಂಸ ಎಂಬ ತೃತೀಯ ಶಿಷ್ಯನ ಸಂಪರ್ಕ. ಎಡೆಬಿಡದೆ ಸಂಚಾರ. ಪ್ರಾಚೀನ ಮಲಯಾಳಂ (1912) ಕೃತಿ ರಚನೆ. ಅದ್ವೈತ ಚಿಂತಾ ಪದ್ಧತಿ ಮುಂತಾದ ಕೃತಿಗಳು.

1914 – ಷಷ್ಟ್ಯಬ್ದಪೂರ್ತಿ, ಕಲಾ – ಸಾಂಸ್ಕೃತಿಕ – ಆಧ್ಯಾತ್ಮಿಕ ಸಾಧನೆಗಳು.

1924 – ವರೆಗೆ ಪೆರುಂಬಾವೂರು, ಕೋಡನಾಡು ಮುಂತಾದ ಕಡೆಗಳಲ್ಲಿ ವಾಸ. ಮತ್ತೆ ತಿರುವನಂತಪುರಕ್ಕೆ. ಕುಂಬಳತ್ತ್ ಶಂಕು ಪಿಳ್ಳೆಯ ಸಂಪರ್ಕ. ಪನ್ಮನದಲ್ಲಿ ಒಂದೆರಡು ತಿಂಗಳು ಸಮಾಧಿಗಾಗಿ ಸ್ಥಳದ ಆಯ್ಕೆ. ಪುನ; ತಿರುವನಂತಪುರಕ್ಕೆ – ರೋಗ ಬಾಧೆ – ಪನ್ಮನಕ್ಕೆ ಹಿಂತಿರುಗಿದ್ದು. ಪ್ರಾಕ್ಕುಳದಲ್ಲಿ ನಾರಾಯಣ ಗುರುಗಳ ಭೇಟಿ.

1924 – ಮೇಷ ಮಾಸ 23 ರ ಹಗಲು ಸಮಯ 3.30 ಕ್ಕೆ ಮಹಾ ಸಮಾಧಿ.

★★★

# ಚಟ್ಟಂಬಿ ಸ್ವಾಮಿ – ಶ್ರೀ ನಾರಾಯಣ ಗುರುಗಳು ಕಂಡಂತೆ
## (ಶ್ರೀ ವಿದ್ಯಾನಂದ ತೀರ್ಥ ಸ್ವಾಮಿಗಳ ಟಿಪ್ಪಣಿ)

ಶ್ರೀ ಚಟ್ಟಂಬಿ ಸ್ವಾಮಿಗಳು ಒಬ್ಬ ಸಕಲ ಕಲಾವಲ್ಲಭ, ಆತ್ಮಾರಾಮ ಹಾಗೂ ಮಹಾ ಸಿದ್ಧನೆನಿಸಿದ್ದರೂ ಈ ವಿಚಾರ ಆ ದಿನಗಳಲ್ಲಿ ಹೆಚ್ಚು ಮಂದಿಗೆ ತಿಳಿದಿರಲಿಲ್ಲ. ಎಲ್ಲ ವಿಷಯಗಳಲ್ಲೂ ಅವರೊಬ್ಬ ಸಾಮಾನ್ಯ ವ್ಯಕ್ತಿಯಂತೆ ನಡೆದುಕೊಂಡದ್ದೇ ಇದಕ್ಕೆ ಕಾರಣವಾಗಿರಬೇಕು. ಆದರೂ ನಾವು ಭಾಗ್ಯಶಾಲಿಗಳೇ. ಯಾಕೆಂದರೆ ಸ್ವಾಮೀಜಿಯ ಹಿರಿಮೆಯನ್ನು ತಿಳಿಯುವುದಕ್ಕೂ, ಅವರಿಗೆ ಬೇಕಾದಷ್ಟು ಉಪಚಾರ ನೀಡುವುದಕ್ಕೂ ಅನೇಕ ಮಂದಿಗೆ ಸಾಧ್ಯವಾಗಿತ್ತು. ಅವರೆಲ್ಲರ ಮೂಲಕ ನಾವಿಂದು ತಿರುವಡಿಗಳ ಬಗ್ಗೆ ಹೆಚ್ಚು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗಿದೆ. ಅಂಥವರಲ್ಲಿ ಶ್ರೀ ನಾರಾಯಣ ಗುರುಗಳು ಪ್ರಮುಖರು. ಅವರಿಗೆ ಚಟ್ಟಂಬಿ ಸ್ವಾಮಿಗಳೇ ಗುರು. ಮಾತ್ರವಲ್ಲದೆ ಅವರ ಜೊತೆ ತುಂಬ ಕಾಲದ ಒಡನಾಟವಿಟ್ಟುಕೊಂಡು ತನ್ನ ಬದುಕನ್ನು ಧನ್ಯವಾಗಿಸಿ ಕೊಂಡವರು. ಕೀರ್ತಿಶಾಲಿಗಳಾದ ನಾರಾಯಣ ಗುರುಗಳು ಶ್ರೀ ತಿರುವಡಿಗಳನ್ನು ಸಂಸ್ಕೃತದಲ್ಲಿ ಸಂಕ್ಷಿಪ್ತವಾಗಿ ವರ್ಣಿಸಿದ್ದಾರೆ. ಇದರಿಂದಲೂ ಚಟ್ಟಂಬಿ ಸ್ವಾಮಿಗಳ ಹಿರಿಮೆಯನ್ನು ಕಾಣಬಹುದು.

ಸರ್ವಜ್ಞ ಋಷಿರುತ್ಕಾಂತ:
ಸದ್ಗುರು: ಶುಕವರ್ತ್ಮನಾ
ಆ ಭಾತಿ ಪರಮ ವ್ಯೋಮ್ನಿ
ಪರಿಪೂರ್ಣ ಕಲಾನಿಧಿ:
ಲೀಲಯಾ ಕಾಲಮಧಿಕಂ
ನಿತ್ವಾಂತೇ ಸ ಮಹಾಪ್ರಭು:
ನಿ: ಸ್ವಂ ವಪು ಸಮತ್ಸೃಜ್ಯ
ಸ್ವಂ ಬ್ರಹ್ಮವಪುರಾಸ್ಥಿತ: ॥

ಈ ಎರಡೂ ಶ್ಲೋಕಗಳು ಚಟ್ಟಂಬಿ ಸ್ವಾಮಿಗಳ ಸಮಾಧಿಯನ್ನು ಕುರಿತಿವೆ. ಏಕಕಾಲದಲ್ಲಿ ಸರ್ವಜ್ಞನಾಗಿ, ಋಷಿಯಾಗಿ ಮತ್ತು ಗುರುವಾಗಿ ಅವರು ಕೊಂಡಾಡಲ್ಪಟ್ಟಿದ್ದಾರೆ. ಅಂತಹ ಸ್ವಾಮಿ ತಿರುವಡಿಗಳು ಪರಲೋಕದಲ್ಲಿ ಪರಿಪೂರ್ಣ ಕಲಾನಿಧಿಯಾಗಿ ಪ್ರಕಾಶಿಸುತ್ತಿದ್ದಾರೆಂಬುದು ಇಲ್ಲಿನ ಆಶಯ. ಇದು ಸದ್ಯೋಮುಕ್ತಿ ಸ್ವರೂಪದ ಬ್ರಹ್ಮ ಪ್ರಾಪ್ತಿ ವಿಧಾನ. ಮುಕ್ತಿಗೆ ಶುಕ ಹಾಗೂ ಪಿ ಪೀಲಿಕಾ ಎಂದು

ಎರಡು ಮಾರ್ಗಗಳಿವೆ. ಇರುವೆಗಳು ಸಾವಧಾನವಾಗಿ ಬುಡದಿಂದ ಹತ್ತಿ ಮರದ ಶಿಖರ ಭಾಗಕ್ಕೇರಿ ಹಣ್ಣಿನೆಡೆಗೆ ತಲುಪುವ ಕ್ರಮಕ್ಕೆ ಪಿಪಿಲೀಕಾ ಮಾರ್ಗವೆನ್ನುತ್ತಾರೆ. ಜೀವವು ಬ್ರಹ್ಮ ಚೈತನ್ಯಕ್ಕೆ ಸಾವಧಾನವಾಗಿ ತಲುಪುವ ವಿಧಾನ ಅಂದರೆ ಇದೆ. ಇದಕ್ಕೆ ಕ್ರಮ ಮುಕ್ತಿ ಎಂದೂ ಹೆಸರಿದೆ. ಶುಕಮಾರ್ಗಾವಲಂಬಿಯಾದ ಜೀವ ನೇರವಾಗಿ ಬ್ರಹ್ಮಲೋಕಕ್ಕೆ ತಲುಪುತ್ತದೆ. ಪರಾಶ್ರಯವಿಲ್ಲದೆಯೇ ಒಂದು ಗಿಳಿ ಮರದ ತುದಿಯಲ್ಲಿರುವ ಕಾಯಿಗಳ ಬಳಿ ಸೇರುವುದೆಂದರೆ ನೇರವಾಗಿ ಬ್ರಹ್ಮವನ್ನು ಹೊಂದುವ ರೀತ್ಯಿಯೇ ಆಗಿದೆ. 'ಶುಕವರ್ತ್ಮನಾ' ಎಂದು ನಾರಾಯಣ ಗುರುಗಳು ಸದ್ಯೋಮುಕ್ತಿ ಪಡೆದ ಚಟ್ಟಂಬಿ ಸ್ವಾಮಿಗಳ ರೀತಿಯನ್ನು ಉದಾಹರಿಸುತ್ತಾರೆ. ಇಂತಹ ಮುಕ್ತಿಯನ್ನು ಜಗತ್ತಿನಲ್ಲಿ ಮಹರ್ಷಿಗಳಂಥ ಕೆಲವರೇ ಹೊಂದ ಬಲ್ಲರು. ಶ್ರೀ ನಾರಾಯಣ ಗುರುಸ್ವಾಮಿಗಳೇ ಚಟ್ಟಂಬಿ ಸ್ವಾಮಿಗಳನ್ನು ಕಂಡರಿಸಿದ್ದರಿಂದ ಈ ಇಬ್ಬರ ಗೌರವವೂ ಹೆಚ್ಚಿದಂತಾಗಿದೆ.

"ಆ ಮಹಾಪ್ರಭು ನಮ್ಮ ನಡುವೆ ಮೋದದಿಂದ ದಿನಗಳೆದು ಮರ್ತ್ಯ ಶರೀರದಿಂದ ನುಸುಳಿ ಬ್ರಹ್ಮ ಶರೀರವನ್ನು ಹೊಂದಿದರು" ಎಂದು ಎರಡನೇ ಶ್ಲೋಕ ವಿವರಿಸುತ್ತದೆ. ಇಲ್ಲಿ ಬಳಸಿದ 'ಮಹಾಪ್ರಭು' ಎಂಬ ಪದ ದೇವರನ್ನು ಕುರಿತಿದೆ. ಲೀಲಾ ವಿನೋದಕ್ಕಾಗಿ ದೇವರು ಚಟ್ಟಂಬಿ ಸ್ವಾಮಿಯಾಗಿ ಹುಟ್ಟಿನಿಂದಲೇ ಸಿದ್ಧನಾಗಿ, ಪರಿಪೂರ್ಣ ವ್ಯಕ್ತಿತ್ವವುಳ್ಳವನಾಗಿ, ಜಗತ್ತಿನ ಯಾವುದೇ ವಸ್ತುಗಳ ಕುರಿತ ಮೋಹವಿಲ್ಲದವನಾಗಿ ಆತ್ಮಾರಾಮನಾಗಿ ಬದುಕಿದನೆನ್ನುವ ಈ ಆಶಯ ವಿಶೇಷವಾದದ್ದು. ಶ್ರೀ ನಾರಾಯಣ ಗುರುಗಳ ಅಭಿಪ್ರಾಯದಂತೆ ಮೂಲ ಹಾಗೂ ಭಾಷ್ಯ ಸೇರಿದ ಹಾಗೆ ವ್ಯಾಸ ಹಾಗೂ ಶಂಕರರು ಜೊತೆಗೂಡಿ ಚಟ್ಟಂಬಿ ಸ್ವಾಮಿಯಾಗಿ ಜನ್ಮವೆತ್ತಿದ್ದಾರೆ.

ಮಹಾಕವಿಗಳಾದ ಉಳ್ಳೂರ್, ವಳ್ಳತ್ತೋಳ್, ಮುಲ್ಲೂರ್ ಎಸ್. ಪದ್ಮನಾಭ ಪಣಿಕ್ಕರ್, ನೀಲಕಂಠ ತೀರ್ಥಪಾದರು, ಸಿ. ಎಸ್. ಸುಬ್ರಹ್ಮಣ್ಯ ಪೋತ್ತಿ, ಪಿ. ಗೋಪಾಲನ್ ನಾಯರ್, ಯು. ಗೋವಿಂದನ್ ಕುಟ್ಟಿ ನಾಯರ್, ತಪೋವನ ಸ್ವಾಮಿಗಳು, ಮನ್ನತ್ತ್ ಪದ್ಮನಾಭನ್ ಮುಂತಾಗಿ ನೂರಾರು ಮಂದಿ ಹಿರಿಯರು ತಿರುವಡಿಗಳನ್ನು ಆಧ್ಯಾತ್ಮಿಕ ರಂಗದ ಕ್ರಾಂತಿಕಾರಿ ತಪಸ್ವಿಯಾಗಿ ಗುರುತಿಸಿದ್ದಾರೆ.

ಶ್ರೀ ಚಟ್ಟಂಬಿ ಸ್ವಾಮಿಗಳ ಕುರಿತು ಸಂಸ್ಕೃತದಲ್ಲಿ ಕವಿ ದೀಪ ನಾರಾಯಣ ಪಿಳ್ಳೆ ಎಂಬವರು 110 ಶ್ಲೋಕಗಳುಳ್ಳ ಗ್ರಂಥವೊಂದನ್ನು ಬರೆದಿದ್ದಾರೆ. ಈ ಕಾವ್ಯವನ್ನು ಕಾಶಿಯಲ್ಲಿ ಮುದ್ರಿಸಲಾಯಿತು. ತನ್ನ 55 ನೇ ಹರೆಯದಲ್ಲಿಯೇ ಸ್ವಾಮೀಜಿಯವರು ಉನ್ನತ ಗೌರವಗಳ ನಡುವೆ ಆಧ್ಯಾತ್ಮಿಕ ಗುರುವಾಗಿ ಗುರುತಿಸಲ್ಪಟ್ಟಿರುವುದು ವಿಶೇಷವೇ ಸರಿ.

★★★



ಸ್ವಾತಂತ್ರ್ಯ ಗಳಿಕೆಗೆ ರಾಜಕೀಯ ಆಂದೋಲನಕ್ಕಿಂತ ಮಿಗಿಲಾದ ದಾರಿ ಇನ್ನೊಂದಿಲ್ಲ ಎಂಬ ಸಂದೇಶ ಗಾಂಧೀಜಿಯದ್ದು. ಅದೇ ವೇಳೆ ಸಾಮಾಜಿಕ ಆಂದೋಲನಗಳನ್ನು ಜಾತಿ, ಮೂಢ ನಂಬಿಕೆಗಳ ವಿರುದ್ಧ ಎಂದಷ್ಟೆ ವ್ಯಾಖ್ಯಾನಿಸಿ ವೈಭವೀಕರಿಸಿದವರೆಲ್ಲ ಒಂದೇ ಸಮುದಾಯವನ್ನು ತಿದ್ದುವ ಕೆಲಸವನ್ನಷ್ಟೇ ಮಾಡಿದ್ದಾರೆ. ಹೀಗಾಗಿ ಚಟ್ಟಂಬಿ ಸ್ವಾಮಿಗಳಂಥವರ ಸಾಧನೆಗಳನ್ನು ಗುರುತಿಸಿ ಗೌರವಿಸುವ ಮಾನದಂಡ ಇಲ್ಲದಾಗಿ ಹೋಯಿತು.

ಇವರು ಇಡೀ ಮಾನವ ರಾಶಿಯನ್ನು, ಅದರ ಆವರಣವಾದ ಜೀವ ಜಗತ್ತಿನೊಂದಿಗೆ ಮೇಲೆತ್ತುವ ಮತ್ತು ಅದೇ ಮನುಷ್ಯ ಪ್ರಾಣಿಗಳನ್ನು ಜೀವಪರವಾಗುವಂತೆ ಸಂಸ್ಕಾರ ನೀಡುವ ಕೆಲಸ ಮಾಡಿದರು. ಹೀಗೆ ಈ ಅದ್ಭುತ ಸ್ವಾಮೀಜಿ ಎಂದೆಂದಿಗೂ ಬೆಲೆ ಬಾಳುತ್ತಾರೆ. ಈ ನಿಟ್ಟಿನಲ್ಲಿ ಶ್ರೀ ಚಟ್ಟಂಬಿ ಸ್ವಾಮಿಗಳ ಜೀವನ ಚರಿತ್ರೆಯೆನ್ನುವುದು ಸಮುದಾಯ, ಪಂಥ, ಮತಭೇದ ಗಣಿಸದ ಉನ್ನತ ಓದಿಗೆ ತಕ್ಕುದಾಗಿದೆ.

ಪಿ. ಎನ್. ಮೂಡಿತ್ತಾಯ

ಕಾಸರಗೋಡು ಪ್ರಕಾಶನ (ಅಧ್ಯಕ್ಷ)